ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮದ್ಯಕ್ಕೆ ಅತಿ ಪ್ರಾಚೀನ ಇತಿಹಾಸವಿದೆ. ಲೋಕದಲ್ಲಿ ನಡೆಯುವ ಸಕಲ ಕೇಡುಗಳಿಗೂ ಅನಾಹುತಗಳಿಗೂ ಮೂಲ ಕಾರಣ ಮದ್ಯಪಾನವಾಗಿದೆ. ಮದ್ಯದಿಂದುಂಟಾಗುವ ದುಷ್ಪರಿಣಾಮಗಳು ಅಪಾರ. ಅದನ್ನು ಪಟ್ಟಿ ಮಾಡಿದರೇ ಮೈನವಿರೇಳುತ್ತದೆ. ಎಲ್ಲ ಬಗೆಯ ರೋಗಗಳೂ ಮದ್ಯಪಾನಿಯನ್ನು ಬಾಧಿಸುತ್ತದೆ. ಅದರಿಂದ ಮುಕ್ತಿ ಪಡೆಯುವುದು ಬಹಳ ಕಷ್ಟ.

ಮದ್ಯವನ್ನು 'ಉಮ್ಮುಲ್ ಖಬಾಇಸ್' ಅಥವಾ 'ಪಾಪಗಳ ಜನನಿ' ಎಂದು ಪ್ರವಾದಿ ಮುಹಮ್ಮದ್(ಸ) ಹೇಳಿದ್ದಾರೆ. ಮದ್ಯ ಕುಡಿದಾತನಿಗೆ ಬುದ್ಧಿ ಸ್ತಿಮಿತದಲ್ಲಿರುವುದಿಲ್ಲ, ಬಾಯಿಗೆ ಬಂದಂತೆ ಆತ ಒದರುತ್ತಾನೆ. ಮನಸ್ಸಿಗೆ ಬಂದದ್ದನ್ನು ಮಾಡಿ ಬಿಡುತ್ತಾನೆ. ಏಕೆಂದರೆ ಮದ್ಯದ ಅಮಲಿನಲ್ಲಿ ಅವನ ದೇಹದ ಸಮತೋಲನ ತಪ್ಪಿರುತ್ತದೆ. ಅವನಿಗೆ ತಾಯಿ, ತಂಗಿ, ಮಗಳೆಂಬ ವ್ಯತ್ಯಾಸ ತಿಳಿದಿರುವುದಿಲ್ಲ, ಯಾರ ಮೇಲೆ ಕೈ ಮಾಡಲೂ ಅವನು ಹೇಸುವುದಿಲ್ಲ, ಯಾರೊಂದಿಗೆ ಹೇಗೆ ವರ್ತಿಸಬೇಕೆಂದು ಅವನಿಗೆ ತಿಳಿದಿರುವುದಿಲ್ಲ, ಅತಿಯಾದ ಮದ್ಯ ಸೇವನೆಯು ಪ್ರಾಣಕ್ಕೂ ಕುತ್ತುಂಟು ಮಾಡುತ್ತದೆ.

ಮದ್ಯಪಾನ ಮುಕ್ತವಾದ ಭಾರತದ ಕನಸು ಕಾಣುತ್ತಿದ್ದರು ಗಾಂಧೀಜಿ. ಆದರೆ ಸ್ವಾತಂತ್ರ್ಯ ಲಭಿಸಿ 7 ದಶಕಗಳಾದರೂ ಮದ್ಯದಿಂದ ಮುಕ್ತಿ ದೊರೆತಿಲ್ಲ, ಮಾತ್ರವಲ್ಲ, ಸರಕಾರಗಳು ದ್ವಂದ್ವ ನೀತಿಯನ್ನು ಅನುಸರಿಸುತ್ತಿವೆ. ಒಂದೆಡೆ ಮದ್ಯಪಾನ ಸಂಸಾರ ಪತನವೆಂಬ ಘೋಷಣೆ, ಇನ್ನೊಂದೆಡೆ ಮದ್ಯಪಾನದ ಜಾಹೀರಾತುಗಳು. ಮದ್ಯದಂಗಡಿಗಳಿಗೆ ಲೈಸೆನ್ಸ್. ಇಂದು ಮದ್ಯವಿಲ್ಲದ ಹಳ್ಳಿ-ಗ್ರಾಮಗಳಿಲ್ಲ, ಆದರೆ ನೀರಿಗೆ ಎಲ್ಲೆಲ್ಲೂ ಬರ. ಈ ರೀತಿಯ ದ್ವಂದ್ವ ನಿಲುವಿಗೆ ಆಳುವವರಲ್ಲಿ ದೇವಭಯ ಮತ್ತು ನೈತಿಕ ಪ್ರಜ್ಞೆಯ ಕೊರತೆಯೇ ಕಾರಣ. ಮಾತ್ರವಲ್ಲ, ಧರ್ಮ ಮತ್ತು ಧಾರ್ಮಿಕ ಮೌಲ್ಯಗಳು ಇಂದು ಅಪರಿಚಿತವಾಗಿದೆ. ಭೌತಿಕತೆಯ ಗುಂಗಿನಲ್ಲಿ ಧಾರ್ಮಿಕತೆಗೆ ಸ್ಥಾನವಿಲ್ಲವಂತಾಗಿದೆ.

ಸನ್ಮಾರ್ಗ ವಾರಪತ್ರಿಕೆಯ ಸಂಪಾದಕರಾದ ಎ.ಕೆ.ಕುಕ್ಕಿಲ ವಿರಚಿತ 'ಮದ್ಯಪಾನ: ಪರ ವಿರೋಧ ಮತ್ತು ನಿಜ'ವೆಂಬ ಈ ಕೃತಿಯಲ್ಲಿ ಮದ್ಯಪಾನದ ಕುರಿತಂತೆ ಪರ ಮತ್ತು ವಿರೋಧದ ಎಲ್ಲ ಮಗ್ಗುಲುಗಳನ್ನೂ ಸಂಕ್ಷಿಪ್ತವಾಗಿ ವಿವರಿಸಿ, ಅದರ ನಿಜ ಸ್ಥಿತಿಯನ್ನು ವಾಚಕರ ಮುಂದಿಟ್ಟಿದ್ದಾರೆ. ಕೊನೆಯಲ್ಲಿ ಮದ್ಯಮುಕ್ತ ಸಮಾಜಕ್ಕೆ ಬೇಕಾದ ಮಾರ್ಗಸೂಚಿಯನ್ನೂ ಪುಸ್ತಕದಲ್ಲಿ ತೋರಿಸಿಕೊಡಲಾಗಿದೆ. ಇದರ ಅಧ್ಯಯನವು ಜನರಲ್ಲಿ ಮದ್ಯಪಾನದ ದುಷ್ಪರಿಣಾಮಗಳ ಕುರಿತು ಜಾಗೃತಿ ಮೂಡಿಸಿ, ಒಂದು ಉತ್ತಮ ಹಾಗೂ ಮದ್ಯ ಮುಕ್ತ ಸಮಾಜ ನಿರ್ಮಾಣಕ್ಕೆ ನಾಂದಿ ಹಾಡಲಿ ಎಂದು ಹಾರೈಸುತ್ತೇವೆ.

-ಶಾಂತಿ ಪ್ರಕಾಶನ

# ಅನುಕ್ರಮಣಿಕೆ

## ಮದ್ಯಪಾನದ ಆರಂಭ

ಮದ್ಯಪಾನದ ಆರಂಭದ ಕುರಿತಂತೆ ಗ್ರೀಕ್ ಪುರಾಣದಲ್ಲಿ ಒಂದು ಚಂದದ ಕತೆಯಿದೆ. ಡೆನಿಶಿಯಸ್ ಎಂಬ ದೇವನು ಇಕಾರಿಯೋಸ್‌ನಿಗೆ ಒಂದು ದ್ರಾಕ್ಷಾ ತೋಟವನ್ನು ನೀಡುತ್ತಾನೆ. ಆತನಿಗೊಬ್ಬಳು ಮಗಳಿದ್ದಳು. ಹೆಸರು-ಎರಿಗೋನ್. ಮತ್ತೊಂದು ಸಾಕು ನಾಯಿ ಇತ್ತು. ಆತ ತನ್ನ ಮಗಳು ಮತ್ತು ಸಾಕು ನಾಯಿಯೊಂದಿಗೆ ನೆಮ್ಮದಿಯಿಂದ ಬಾಳುತ್ತಿದ್ದ. ಹೀಗಿರುತ್ತಾ ಒಂದು ದಿನ ಆತ ತನ್ನ ದ್ರಾಕ್ಷಾ ತೋಟದಿಂದ ದ್ರಾಕ್ಷಿಗಳನ್ನು ಕೊಯ್ದು ದ್ರಾಕ್ಷಾರಸ(ಮದ್ಯ) ತಯಾರಿಸಿದ ಮತ್ತು ಅದನ್ನು ಒಂದು ಭರಣಿಯಲ್ಲಿ ತುಂಬಿಸಿಟ್ಟು ಪೆಂಟಲಿಕೂಸ್ ಎಂಬ ಪರ್ವತದ ಬಳಿ ಇರಿಸಿದ. ಒಂದು ದಿನ ಆತ ಕುರಿಗಾಹಿಗಳಾದ ತನ್ನ ಗೆಳೆಯರೊಂದಿಗೆ ದ್ರಾಕ್ಷಾರಸ ಕುಡಿಯಲು ಹೊರಟ. ಅತೀವ ಆಸಕ್ತಿಯಿಂದ ಅವರೆಲ್ಲ ಮನದಣಿಯೆ ಕುಡಿದರು. ಕುಡಿತದ ಪ್ರಮಾಣ ಎಷ್ಟು ಮಿತಿಮೀರಿತೆಂದರೆ ನಿಂತಲ್ಲಿ ನಿಲ್ಲದಾದರು. ತಮ್ಮ ಇರುವಿಕೆ, ಉದ್ಯೋಗ, ಪರಿಚಯ ಎಲ್ಲವನ್ನೂ ಮರೆತರು. ಪರಸ್ಪರ ಜಗಳ, ಹೊಡೆದಾಟಕ್ಕೆ ಇಳಿದರು. ಬೈದಾಡಿದರು. ಮದ್ಯದ ಅಮಲು ಅವರ ಬುದ್ಧಿಮತ್ತೆಯನ್ನೇ ಕೆಡಿಸಿತ್ತು. ಕೊನೆಗೆ ಓರ್ವನು ಇಕಾರಿಯೋಸ್‌ನನ್ನು ಥಳಿಸಿ ಕೊಂದುಹಾಕಿದ. ಅಮಲು ಬಿರಿದ ಬಳಿಕ ಆತನಿಗೆ ತಾನು ಮಾಡಿದ ತಪ್ಪು ಅರಿವಾಗಿ ಪಶ್ಚಾತ್ತಾಪಪಟ್ಟ.

ಮದ್ಯಪಾನಕ್ಕೆ ಸಂಬಂಧಿಸಿ ಈ ಜಗತ್ತಿನಲ್ಲಿ ನಡೆದ ಮೊಟ್ಟಮೊದಲ ಕೊಲೆ ಎಂದು ಸಾಮಾನ್ಯವಾಗಿ ಈ ಘಟನೆಯನ್ನು ಉಲ್ಲೇಖಿಸಲಾಗುತ್ತದೆ. ಮದ್ಯಪಾನಿಯ ಮೇಲೆ ಮದ್ಯ ಬೀರುವ ಪರಿಣಾಮವನ್ನು ಪರಿಗಣಿಸಿದರೆ ಈ ಕೊಲೆಯನ್ನಂತೂ ತಿರಸ್ಕರಿಸಲು ಸಾಧ್ಯವಿಲ್ಲ. ಇದು ಮೊಟ್ಟ ಮೊದಲ ಕೊಲೆಯೋ ಅಲ್ಲವೋ ಎಂಬ ಬಗ್ಗೆ ಮಾತ್ರ ಸಂಶಯ ತಾಳುವ ಅವಕಾಶವಷ್ಟೇ ನಮಗೆ ಉಳಿದಿದೆ.

ಪ್ರವಾದಿ ಮುಹಮ್ಮದ್(ಸ) ಅವರು ಒಂದು ಘಟನೆಯನ್ನು ಹೀಗೆ ವಿವರಿಸುತ್ತಾರೆ-

ಸಾತ್ವಿಕನಾದ ಓರ್ವ ವ್ಯಕ್ತಿಯು ಒಂದು ಸನ್ನಿವೇಶಕ್ಕೆ ಸಿಲುಕಿ ಬಂಧನಕ್ಕೀಡಾಗುತ್ತಾನೆ. ಕೈದಿಯಾಗಿರುವ ಆತನ ಮುಂದೆ ಮೂರು ಕೆಡುಕುಗಳನ್ನು ಇರಿಸಲಾಗುತ್ತದೆ. ಮದ್ಯ, ವ್ಯಭಿಚಾರ ಮತ್ತು ಕೊಲೆ. ಈ ಮೂರರಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಲೇ ಬೇಕಾದ ಅನಿವಾರ್ಯತೆ ಆತನಿಗೆ ಎದುರಾಗುತ್ತದೆ. ಸಾತ್ವಿಕನಾದ ಆತ ಆ ಮೂರರ ಬಗ್ಗೆಯೂ ತೀರಾ ಜಿಗುಪ್ಸೆ ಉಳ್ಳವ. ಬದುಕಿನಾದ್ಯಂತ ಆ ಮೂರನ್ನೂ ತಿರಸ್ಕರಿಸಿದವ. ಸಾತ್ವಿಕ ಬದುಕಿನ ದಾರಿಯಲ್ಲಿ ಮದ್ಯ, ಮಾನಿನಿ

ಮತ್ತು ಕೊಲೆ ಇವು ಮೂರೂ ಅಡ್ಡದಾರಿಗಳೆಂದೇ ತಿಳಿದವ. ಆದರೆ ಕೈದಿಯಾಗಿ ಆತ ಆಜ್ಞೆಗಳನ್ನು ಪಾಲಿಸಲೇ ಬೇಕಾಗುತ್ತದೆ. ಆದ್ದರಿಂದ ಮೂರರಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳುವುದಕ್ಕಾಗಿ ಮೂರರಲ್ಲಿರುವ ಕೆಡುಕುಗಳ ಪ್ರಮಾಣವನ್ನು ಅಳೆಯುತ್ತಾನೆ. ವ್ಯಭಿಚಾರ ಮತ್ತು ಕೊಲೆಯ ಎದುರು ಆತನಿಗೆ ಮದ್ಯಪಾನವು ತುಸು ಸೌಮ್ಯ ಕೆಡುಕಾಗಿ ಕಾಣಿಸುತ್ತದೆ. ಯಾಕೆಂದರೆ, ಮದ್ಯಪಾನವು ಆತನಿಗೊಬ್ಬನಿಗೇ ಸಂಬಂಧಿಸಿದ ಸಂಗತಿಯಾದರೆ ವ್ಯಭಿಚಾರ ಮತ್ತು ಕೊಲೆಯು ಇತರರಿಗೆ ಸಂಬಂಧಿಸಿದ್ದು. ಏನೇ ಆದರೂ ಕೆಡುಕಿನಲ್ಲಿ ಭಾಗವಹಿಸಲೇಬೇಕು. ಇಂಥ ಅನಿವಾರ್ಯತೆಯಲ್ಲಿ ಇತರರಿಗೆ ತೊಂದರೆಯಾಗದ ಆಯ್ಕೆಯೇ ಉತ್ತಮ ಎಂದು ಭಾವಿಸಿ ಆತ ಮದ್ಯವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಆದರೆ ಮದ್ಯ ಸೇವಿಸುತ್ತಾ ಆತ ಸ್ವಯಂ ನಿಯಂತ್ರಣವನ್ನು ಕಳೆದುಕೊಳ್ಳುತ್ತಾನೆ. ಎಲ್ಲಿಯವರೆಗೆಂದರೆ ಆತ ಯಾವುದನ್ನು ಮಹಾಪಾಪ ಎಂದು ಪರಿಗಣಿಸಿದ್ದನೋ ಅದೇ ಪಾಪವನ್ನು ಮಾಡುವಷ್ಟು. ಮದ್ಯದ ಅಮಲಿನಲ್ಲಿ ಆತ ವ್ಯಭಿಚಾರ ಮಾಡಿದನಲ್ಲದೇ ಕೊಲೆಯನ್ನೂ ನಡೆಸುತ್ತಾನೆ.

ದುರಂತ ಏನೆಂದರೆ, ಇಂಥ ಪ್ರಕರಣ ಅಥವಾ ಘಟನೆಗಳನ್ನು ಆಲಿಸಲು ಪುರುಸೊತ್ತಿಲ್ಲದಷ್ಟು ಆಧುನಿಕ ಜಗತ್ತು ಇವತ್ತು ಮದ್ಯಪಾನ ಮತ್ತು ಮದ್ಯ ವ್ಯಾಪಾರದಲ್ಲಿ ಬ್ಯುಸಿಯಾಗಿದೆ ಎಂಬುದು. ಜಾಗತಿಕ ಮದ್ಯ ತಯಾರಕ ಕಂಪೆನಿಗಳು 2014ರಲ್ಲಿ ಒಂದು ಟ್ರಿಲ್ಯನ್ ಡಾಲರ್ ಆದಾಯದ ನಿರೀಕ್ಷೆಯಿಟ್ಟುಕೊಂಡು ಕೆಲಸ ಮಾಡಿವೆ ಎಂದು ಹೇಳಲಾಗುತ್ತಿದೆ. 2014ರಲ್ಲಿ ಒಟ್ಟು 210 ಬಿಲಿಯನ್ ಲೀಟರ್ ಮದ್ಯ ತಯಾರಿಕೆ ಆಗಬಹುದೆಂಬ ಅಂದಾಜು ಮಾಡಲಾಗಿತ್ತು. ಆದರೆ 2014 ಮುಗಿದಾಗ ಈ ಅಂದಾಜು ಗುರಿ ಮೀರಿತ್ತು. 2015ರಲ್ಲಿ ಇದನ್ನೂ ಮೀರಿದ ಸಾಧನಾ ಪಟ್ಟಿಯೊಂದು ಖಂಡಿತ ಬಿಡುಗಡೆಯಾಗಲಿ. ಯಾಕೆಂದರೆ, ಕಳೆದ 5 ವರ್ಷಗಳಲ್ಲಿ ಉತ್ಪಾದನಾ ಪ್ರಮಾಣ 10% ಹೆಚ್ಚಿದೆ. ಹಾಗೆಯೇ ಭಾರತದಲ್ಲಿ ಪ್ರತಿವರ್ಷ ಈ ಉತ್ಪಾದನಾ ಪ್ರಮಾಣ 11% ಹೆಚ್ಚುತ್ತಲಿದೆ. 2006-07ರಲ್ಲಿ ಭಾರತದ ಒಟ್ಟು ರಾಜ್ಯಗಳು ಮದ್ಯದಿಂದ ಸುಮಾರು 30 ಸಾವಿರ ಕೋಟಿ ರೂಪಾಯಿಗಳನ್ನು ಗಳಿಸಿವೆ. ಈ ದೇಶದಲ್ಲಿ ಪ್ರತಿ ರಾಜ್ಯವೂ ಸೇಲ್ಸ್‌ಟ್ಯಾಕ್ಸ್ (ಮಾರಾಟ ತೆರಿಗೆ)ನ ಬಳಿಕ ಅತೀ ಹೆಚ್ಚು ಆದಾಯ ಗಳಿಸುತ್ತಿರುವುದು ಮದ್ಯದಿಂದ. 1990ರಲ್ಲಿ ಈ ದೇಶದಲ್ಲಿ ಮದ್ಯದ ಪ್ರಥಮ ಸಿಪ್(ರುಚಿ) ತೆಗೆದುಕೊಳ್ಳುವವರ ಸರಾಸರಿ ವಯಸ್ಸು 28 ಇತ್ತು. ಇವತ್ತು ಅದರಲ್ಲಿ ಎಷ್ಟರ ಮಟ್ಟಿನ ಮಾರ್ಪಾಟು ಆಗಿದೆಯೆಂದರೆ ಈ ವಯಸ್ಸಿನ ಪ್ರಮಾಣ 18ಕ್ಕೆ ಕುಸಿದಿದೆ. ಕಳೆದ 15 ವರ್ಷಗಳ ಅವಧಿಯಲ್ಲಿ ಕುಡಿತದ ಚಟವು ತೀರಾ ಹದಿಹರೆಯದ ಮಕ್ಕಳಿಗೆ ತಲುಪಿಬಿಟ್ಟಿದೆ. ಕುಡಿತವನ್ನು ಸಹಜ ಪ್ರಕ್ರಿಯೆಯಾಗಿ ಬಿಂಬಿಸುವ ಪ್ರಯತ್ನಗಳು ಅತ್ಯಂತ ಪ್ರಬಲವಾಗಿ ಸಾಗುತ್ತಿವೆ.

ಮದ್ಯಪಾನದ ವಯಸ್ಸನ್ನು 21 ರಿಂದ 25ಕ್ಕೆ ಏರಿಸಿ ಮಹಾರಾಷ್ಟ್ರ ಸರಕಾರವು 2011ರಲ್ಲಿ ಆದೇಶ ಹೊರಡಿಸಿತು. ಮಾಧ್ಯಮಗಳು ಈ ಕುರಿತಂತೆ ಬಿರುಸಿನ ಚರ್ಚೆ ನಡೆಸಿದವು. ಮದ್ಯಪಾನದ ವಯಸ್ಸನ್ನು 21 ರಿಂದ ಕೆಳಗೆ ಇಳಿಸಬೇಕಾದ ಸಾಮಾಜಿಕ ಸನ್ನಿವೇಶಗಳುಳ್ಳ ಈ

ಆಧುನಿಕ ಕಾಲದಲ್ಲಿ ವಯಸ್ಸಿನ ಮಿತಿಯನ್ನು ಏರಿಸಿದ್ದೇಕೆ ಎಂದು ಹಲವು ಮಂದಿ ಪ್ರಶ್ನಿಸಿದರು. ಖ್ಯಾತ ನಟ ಅಮಿತಾಬ್ ಬಚ್ಚನ್‌ರು 2011, ಜೂನ್‌ನಲ್ಲಿ ಹೀಗೆ ಟ್ವೀಟ್ ಮಾಡಿದ್ದರು:

''ಕಿಂಗ್‌ಫಿಶರ್ ಎಂಬ ವಿಶ್ವದ ಅಗ್ರಮಾನ್ಯ ಮದ್ಯ ತಯಾರಕ ಕಂಪೆನಿಯ ಜನರಲ್ ಮ್ಯಾನೇಜರ್(GM) ಸಿದ್ಧಾರ್ಥ್ ಮಲ್ಯರ ವಯಸ್ಸು 23. ತನ್ನ ಕಂಪೆನಿ ಮದ್ಯ ತಯಾರಿಸುತ್ತಿದ್ದರೂ ಮತ್ತು ಅದನ್ನು ಸ್ವಯಂ ತಾನೇ ಮುನ್ನಡೆಸುತ್ತಿದ್ದರೂ ಆತ ಮದ್ಯ ಕುಡಿಯುವಂತಿಲ್ಲ, ಇದೆಂಥ ವಿಪರ್ಯಾಸ'' ಎಂದಿದ್ದರು.

1. ಜಾಮಿಯಾ ಮಿಲ್ಲಿಯಾ ಇಸ್ಲಾಮಿಯಾ
2. ಅಲಿಘರ್ ಮುಸ್ಲಿಮ್ ಯುನಿವರ್ಸಿಟಿ
3. ಜವಾಹರಲಾಲ್ ನೆಹರೂ ಯುನಿವರ್ಸಿಟಿ

ಈ ಮೂರೂ ಯೂನಿವರ್ಸಿಟಿಗಳಲ್ಲಿ 2012ರಲ್ಲಿ ಒಂದು ಸಮೀಕ್ಷೆಯನ್ನು ಕೈಗೊಳ್ಳಲಾಗಿತ್ತು. ಫಲಿತಾಂಶವಂತೂ ಸರ್ವೇ ನಡೆಸಿದವರನ್ನೇ ದಂಗು ಬಡಿಸುವಂತಿತ್ತು. ಯುವ ಸಮುದಾಯದ ನಡುವೆ ಮದ್ಯ ಅಪರಿಚಿತವಾಗಿಲ್ಲ, ಮಾತ್ರವಲ್ಲ, ಅವು ಕುಡಿತವನ್ನು ಫ್ಯಾಶನ್ (Fashion) ಎಂದೇ ಪರಿಗಣಿಸಿವೆ, ಎಲೈಟ್ ಗುಂಪಿನಲ್ಲಿ ಗುರುತಿಸಿ ಕೊಳ್ಳುವುದಕ್ಕೆ ಕುಡಿತ ಅನಿವಾರ್ಯ ಎಂಬ ನಿಲುವಿನೊಂದಿಗೆ ಅವು ಬದುಕುತ್ತಿವೆ ಎಂಬ ವರದಿಯನ್ನು ನೀಡಲಾಗಿತ್ತು.

## ಆಧುನಿಕ ತಲೆಮಾರು ಮತ್ತು ಧರ್ಮಗ್ರಂಥಗಳು

ಇವತ್ತಿನ ದಿನಗಳಲ್ಲಿ ಸರ್ವೇಗೆ (ಸಮೀಕ್ಷೆ) ಆಯ್ದುಕೊಳ್ಳದೇ ಇರುವ ಕ್ಷೇತ್ರವೊಂದಿದ್ದರೆ ಅದು ಮದ್ಯಪಾನಿಗಳ ಕ್ಷೇತ್ರ. ಯಾಕೆಂದರೆ ಈ ಕ್ಷೇತ್ರ ಇವತ್ತು ಕೆಡುಕಿನ ಹಣೆಪಟ್ಟಿಯಿಂದ ಬಹುತೇಕ ಹೊರಬಿದ್ದು ಪ್ರತಿ ಮನೆಗಳ ಅಭಿರುಚಿಯ ಪಟ್ಟಿಯಲ್ಲಿ ಸ್ಥಾನ ಪಡಕೊಂಡು ಬಿಟ್ಟಿದೆ. ಸಾದಾತ್ ಹಸನ್ ಮಾಂಟೋರ ಅದ್ಭುತ ಕತೆಗಳ ಪ್ರೇರಕವಾಗಿ ಮದ್ಯವನ್ನು ಉದಾಹರಿಸಲಾಗುತ್ತದೆ. ಹೆಸರಾಂತ ಬರಹಗಾರ ಖುಷ್ವಂತ್ ಸಿಂಗ್‌ರ ದೀರ್ಘ ಆಯುಷ್ಯದ ಗುಟ್ಟನ್ನು ಮದ್ಯದ ಜೊತೆ ಹೋಲಿಸಿ ಹೇಳಲಾಗುತ್ತದೆ. ಮಾತ್ರವಲ್ಲ, ಬುದ್ಧಿಜೀವಿ, ಪ್ರಗತಿಪರ ಎಂದೆನಿಸಿಕೊಳ್ಳಬೇಕಾದರೆ ಮದ್ಯದೊಂದಿಗೆ ಸಲುಗೆಯ ಧೋರಣೆ ಇರಬೇಕು ಎಂಬ ನಿಲುವು ಸದಾ ಹರಿದಾಡುತ್ತಿರುತ್ತದೆ. ಬರಹಗಾರನಲ್ಲಿ ಚಿಂತನೆಗಳು ಹುಟ್ಟುವುದೇ ಮದ್ಯದ ಅಮಲಿನಲ್ಲಿ ಎಂಬ ಮಾತೂ ಇದೆ. ಬಹುಶಃ ಅನಾದಿ ಕಾಲದಿಂದಲೇ ಈ ಜಗತ್ತು ಮದ್ಯದ ಸುತ್ತ ಹತ್ತು ಹಲವು ಕತೆ, ಮಿಥ್ಯೆ, ಐತಿಹ್ಯಗಳನ್ನು ಸೃಷ್ಟಿಸುತ್ತಾ ಬಂದಿದೆ. ಅದರ ವಿರುದ್ಧದ ದನಿಯನ್ನು ಧಾರ್ಮಿಕವಾಗಿ ಎದುರಿಸಲಾಗದೇ ವೈಚಾರಿಕ ಮತ್ತು ಸಾಂಸ್ಕೃತಿಕ ವಾದಗಳ ಮೂಲಕ ಸೋಲಿಸಲು ಯತ್ನಿಸುತ್ತಿವೆ. ಇದಕ್ಕೆ ಪೂರಕವಾಗಿ ದೇಶ, ಭಾಷೆ, ಸನ್ನಿವೇಶ, ವಾತಾವರಣಗಳ ಸಬೂಬನ್ನೂ ನೀಡುತ್ತಿವೆ. ಅಮೇರಿಕದ ತಂಪಿನ ವಾತಾವರಣದಲ್ಲಿ ಕುಡಿಯದಿರಲು ಸಾಧ್ಯವಿಲ್ಲವೆಂದೋ

ಜಗತ್ತಿನ ಬೇರೆ ಬೇರೆ ಪ್ರದೇಶಗಳ ಭಿನ್ನ ಭಿನ್ನ ವಾತಾವರಣಗಳು ವಿವಿಧ ಆಹಾರ, ಸಂಸ್ಕೃತಿ, ಸಂದರ್ಭಗಳ ಸ್ಥಿತಿಯಲ್ಲಿ ಮದ್ಯ ಅನಿವಾರ್ಯ ಎಂದು ಕಾರಣಗಳನ್ನು ನೀಡಲಾಗುತ್ತಿದೆ. ಆದರೆ ಮದ್ಯ ಅಗತ್ಯವೋ ಅಲ್ಲವೋ ಎಂಬ ಪ್ರಶ್ನೆಯೊಂದಿಗೆ ವಸ್ತುನಿಷ್ಠವಾದ ಸಂವಾದಕ್ಕೆ ಅಥವಾ ವಿಶ್ಲೇಷಣೆಗೆ ನಿಂತರೆ ಈ ಸನ್ನಿವೇಶ, ವಾತಾವರಣ, ದೇಶ, ಭಾಷೆ, ಸಂಸ್ಕೃತಿಗಳ ಕಾರಣಗಳು ಬಲ ಪಡೆಯುವುದಿಲ್ಲ, ಅವುಗಳೆಲ್ಲ ಮದ್ಯಪಾನ ಮಾಡುವುದಕ್ಕಾಗಿ ಮಾನವನು ಸ್ವಯಂ ಕಂಡುಕೊಂಡ ಸಮರ್ಥನೆಗಳು ಎಂಬುದು ಸ್ಪಷ್ಟವಾಗುತ್ತದೆ. ಯಾಕೆಂದರೆ, ಒಂದು ಧರ್ಮ ಅಲ್ಲ. ಎಲ್ಲ ಧರ್ಮಗಳೂ ಮದ್ಯವನ್ನು ವಿರೋಧಿಸಿವೆ. ಅದನ್ನು ಕೆಡುಕು ಅಂದಿವೆ. ಹಾಗಂತ ಎಲ್ಲ ಧರ್ಮಗಳೂ ಒಂದೇ ದೇಶ, ಭಾಷೆ, ವಾತಾವರಣಗಳಲ್ಲಿ ಹಬ್ಬಿಕೊಂಡದ್ದೇನಲ್ಲವಲ್ಲ, ಬೇರೆ ಬೇರೆ ಜನಾಂಗ, ವಾತಾವರಣ, ದೇಶ, ಸನ್ನಿವೇಶಗಳಲ್ಲಿ ಹುಟ್ಟು ಪಡೆದ ಧರ್ಮಗಳೆಲ್ಲ ಯಾಕೆ ಏಕ ಪ್ರಕಾರವಾಗಿ ಮದ್ಯ ವಿರೋಧಿಯಾಗಿವೆ? ಸಾಮಾನ್ಯವಾಗಿ ಕ್ರೈಸ್ತ ಧರ್ಮದಲ್ಲಿ ಮದ್ಯಪಾನಕ್ಕೆ ಅವಕಾಶ ಇದೆ ಎಂದು ಸಮರ್ಥಿಸುವುದಿದೆ. ''ಮದ್ಯ ಮತ್ತು ಜೂಜಿನಲ್ಲಿ ಮಹತ್ತರವಾದ ಕೇಡಿದೆ ಎಂದೋ (2:219) ಅಥವಾ ಮದ್ಯ ಮತ್ತು ಜೂಜಿನ ಮೂಲಕ ಶೈತಾನನು ನಿಮ್ಮೊಳಗೆ ವೈರತ್ವ ಹಾಗೂ ದ್ವೇಷವನ್ನು ಉಂಟು ಮಾಡಲು ಇಚ್ಛಿಸುತ್ತಾನೆ ಎಂದೋ (5:91) ಪವಿತ್ರ ಕುರ್‌ಆನಿನಲ್ಲಿರುವಂತೆ ಬೈಬಲಿನಲ್ಲಿ ಇಲ್ಲ ಎಂದೂ ವಾದಿಸುವುದಿದೆ. ಆದರೆ ಈ ವಾದ ನಿಜವಲ್ಲ, ಬೈಬಲ್ ಆಗಲಿ, ಹಿಂದೂ ಧರ್ಮವಾಗಲಿ ಅಥವಾ ಪುರಾತನವಾದ ಯಾವುದೇ ಧರ್ಮಪ್ರೇರಿತ ಸಂಸ್ಕೃತಿ, ಮತಗಳಾಗಲಿ ಎಲ್ಲವೂ ಮದ್ಯಪಾನದ ವಿರುದ್ಧವೇ ಇದ್ದುವು. 'The use of wine in the old Testament' ಎಂಬ ತಮ್ಮ 1979ರ ಡಾಕ್ಟರೇಟ್ ಪ್ರಬಂಧದಲ್ಲಿ ಕ್ರೈಸ್ತ ವಿದ್ವಾಂಸ ಡಾ|ರಾಬರ್ಟ್ ಟೆಕೌಟ್ (Tea Chout) ಹೀಗೆ ಬರೆದಿದ್ದಾರೆ–

'Alcohol is never approved by God in any amount for obedient Christian'– 'ವಿಧೇಯ ಕ್ರೈಸ್ತನಿಗೆ ದೇವನು ಎಂದೂ ಮದ್ಯವನ್ನು ಅನುಮತಿಸಿಲ್ಲ.' 1989ರಲ್ಲಿ ಡಾ| ಸ್ಯಾಮುವೆಲ್ ಬಚಿಯೋಚಿ (Bacchiocchi) ಎಂಬವರು ಬರೆದ 'Wine in the Bible' ಎಂಬ ಕೃತಿಯಲ್ಲಿ ಹೇಳುವುದು ಹೀಗೆ–

'Drinking alcohol is ... a moral issue. It is.. transgression of God's Law...'- 'ಮದ್ಯಪಾನವು ಒಂದು ನೈತಿಕ ವಿಷಯವಾಗಿದ್ದು ಅದು ದೇವನ ಕಾನೂನನ್ನು ಉಲ್ಲಂಘಿಸುತ್ತದೆ.' ಇವು ಮಾತ್ರವಲ್ಲ, ಯಶಾಯ 24:9, ಲೂಕ 12:45, 21:34ರಲ್ಲೂ ಮದ್ಯ ವಿರೋಧಿ ಸ್ಪಷ್ಟ ಪ್ರಸ್ತಾಪಗಳಿವೆ. ಮನುಸ್ಮೃತಿಯ 9:235, 11:55 ವಚನಗಳು ಮತ್ತು ಋಗ್ವೇದದ 8:2:12, 8:21:14ರಲ್ಲೂ ಮದ್ಯವಿರೋಧಿ ಪ್ರಬಲ ನಿಲುವುಗಳಿವೆ.

## ಮದ್ಯ ಮತ್ತು ದ್ವಂದ್ವ:

2001ರಲ್ಲಿ ಪತ್ರಕರ್ತ ತರುಣ್ ತೇಜ್‌ಪಾಲ್‌ರ 'ತೆಹಲ್ಕಾ ಡಾಟ್ ಕಾಮ್' ಎಂಬ ಆನ್‌ಲೈನ್ ಪತ್ರಿಕಾ ತಂಡವು ಭಾರತದಲ್ಲಿ ಬಹುಚರ್ಚೆಗೆ ಕಾರಣವಾದ ಮತ್ತು ಆಗಿನ ರಕ್ಷಣಾ ಸಚಿವ ಜಾರ್ಜ್ ಫರ್ನಾಂಡಿಸ್‌ರ ತಲೆದಂಡಕ್ಕೆ ನಿಮಿತ್ತವಾದ ಹಗರಣವೊಂದನ್ನು

ಬಯಲಿಗೆಳೆಯಿತು. ರಕ್ಷಣಾ ಹಗರಣ (ಆಪರೇಶನ್ ವೆಸ್ಟ್ ಎಂಡ್) ಎಂಬ ಹೆಸರಲ್ಲಿ ಆ ಕಾರ್ಯಾಚರಣೆ ಈಗಲೂ ಗುರುತಿಸಿಕೊಳ್ಳುತ್ತಿದೆ. ರಕ್ಷಣಾ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳುವ ಕುರಿತಂತೆ ರಕ್ಷಣಾ ಇಲಾಖೆ-ಸೇನಾ ವಲಯದಲ್ಲಿ ಯಾವ ಬಗೆಯ ಭ್ರಷ್ಟಾಚಾರ ನಡೆಯುತ್ತಿದೆ ಎಂಬುದನ್ನು ರಹಸ್ಯ ಕ್ಯಾಮರಾದ ಮೂಲಕ (ಸ್ಟಿಂಗ್ ಆಪರೇಶನ್) ಬಹಿರಂಗ ಪಡಿಸಲಾದ ಪ್ರಕರಣ ಅದು. ಹಿಡನ್ (ರಹಸ್ಯ) ಕ್ಯಾಮರಾದ ಮೂಲಕ ಈ ದೇಶದಲ್ಲಿ ಭ್ರಷ್ಟಾಚಾರವನ್ನು ಬಯಲಿಗೆ ತಂದ ಮೊದಲ ಪ್ರಕರಣವೂ ಹೌದು. ಆದರೆ ಈ ಹಗರಣವನ್ನು ಪತ್ತೆ ಹಚ್ಚುವ ದಾರಿಯಲ್ಲಿ ಸೇನಾ ಮುಖಂಡರು ಮತ್ತಿತರ ಉನ್ನತ ಅಧಿಕಾರಿಗಳಿಗೆ ಮದ್ಯ ಮತ್ತು ಮಾನಿನಿಯರನ್ನು ಯಥೇಚ್ಛವಾಗಿ ಪೂರೈಸಲಾಗಿತ್ತು ಎಂಬುದು ಆ ಬಳಿಕ ಗಂಭೀರ ಚರ್ಚೆಗೆ ಎಡೆಮಾಡಿಕೊಟ್ಟಿತ್ತು. ಮದ್ಯ ಮತ್ತು ಮಾನಿನಿಯರನ್ನು ಒದಗಿಸಿ ಒಂದು ಹಗರಣವನ್ನು ಬಯಲಿಗೆ ತರುವ ವಿಧಾನವು ಎಷ್ಟು ನೈತಿಕವಾದುದು ಎಂಬ ಪ್ರಶ್ನೆ ಹಲವು ಕಡೆಗಳಿಂದ ಕೇಳಿ ಬಂದಿತ್ತು. ಭಾರತದ ಗುಪ್ತಚರ ಸಂಸ್ಥೆ(IB)ಯ ಮಾಜಿ ಮುಖ್ಯಸ್ಥ ಎಂ.ಕೆ.ನಾರಾಯಣ್‌ರು ಈ ಕಾರ್ಯಾಚರಣೆಯ ನೈತಿಕತೆಯನ್ನು ಪ್ರಶ್ನಿಸಿ 2001 ಮಾರ್ಚ್ 26ರ ಏಶಿಯನ್ ಏಜ್ ಪತ್ರಿಕೆಯಲ್ಲಿ ಲೇಖನ ಬರೆದರು. 'ಇಂಥ ಕಾರ್ಯಾಚರಣೆಗಳು ಸಾಧ್ಯವಿಲ್ಲ' ಎಂದು ಅವರು ವಿರೋಧ ವ್ಯಕ್ತಪಡಿಸಿದ್ದರು. 2012ರಲ್ಲಂತೂ ಮದ್ಯವು ದೇಶವ್ಯಾಪಿ ಚರ್ಚೆಗೆ ಮತ್ತೊಮ್ಮೆ ತೆರೆದುಕೊಂಡಿತ್ತು. ನಿರ್ಭಯ (ಜ್ಯೋತಿಸಿಂಗ್ ರಾವತ್) ಎಂಬ ಹೆಸರಿನ ಮೆಡಿಕಲ್ ವಿದ್ಯಾರ್ಥಿನಿಯನ್ನು ಮೂವರು ದೆಹಲಿಯಲ್ಲಿ ಬರ್ಬರವಾಗಿ ಅತ್ಯಾಚಾರ ಮಾಡಿದ್ದು ಮತ್ತು ಆಕೆ ಸಾವಿಗೀಡಾದ ಘಟನೆಯ ಸುತ್ತ ವಿವಿಧ ದೃಷ್ಟಿಕೋನಗಳಲ್ಲಿ ಚರ್ಚೆಗಳು ನಡೆದವು. ಹೆಣ್ಣಿನ ಬಟ್ಟೆ, ತಡರಾತ್ರಿ ಪಾರ್ಟಿಗಳು, ಅಶ್ಲೀಲ ಸಿನಿಮಾಗಳು, ಪೋರ್ನ್(ಅಶ್ಲೀಲ) ಸೈಟ್‌ಗಳ ಜೊತೆಜೊತೆಗೇ ಮದ್ಯವೂ ಪ್ರಮುಖ ಇಶ್ಯೂ ಆಗಿ ಮುನ್ನೆಲೆಗೆ ಬಂತು. ಯಾಕೆಂದರೆ ನಿರ್ಭಯಳ ಮೇಲೆ ಅತ್ಯಾಚಾರವೆಸಗಿದ ಆ ಮೂವರು ಅಪರಾಧಿಗಳೂ ಮದ್ಯಪಾನಿಗಳಾಗಿದ್ದರು. ಇದರ ಹೊರತಾಗಿಯೂ ಈ ದೇಶದಲ್ಲಿ ಮದ್ಯ ಆಗಾಗ ಚರ್ಚಾ ವಸ್ತುವಾಗುತ್ತಿರುತ್ತದೆ. ಕಳ್ಳಭಟ್ಟಿ ಸೇವನೆಯಿಂದ ಆಗಾಗ ಸಂಭವಿಸುತ್ತಿರುವ ಸಾವುಗಳ ಸಂದರ್ಭಗಳಲ್ಲೂ ಬಿರುಸಿನ ಚರ್ಚೆಗಳು ನಡೆಯುವುದಿದೆ. ಆದರೆ ಅಂತಿಮವಾಗಿ ಈ ಚರ್ಚೆಗಳೆಲ್ಲ ಮಳೆಹಾತೆಗಳಂತೆ ಹುಟ್ಟಿದಷ್ಟೇ ವೇಗವಾಗಿ ಸಾಯುತ್ತವೆಯೇ ಹೊರತು ಮದ್ಯಪಾನಿಗಳು ಮತ್ತು ಮದ್ಯ ಒದಗಿಸುವ ವ್ಯವಸ್ಥೆಯ ಮೇಲೆ ಪರಿಣಾಮ ಬೀರುವಲ್ಲಿ ವಿಫಲವಾಗುತ್ತಿವೆ. ಹೀಗಾಗುತ್ತಿರುವುದಕ್ಕೆ ಕಾರಣಗಳೇನು?

ಮಲೇರಿಯಾ ಕಾಯಿಲೆಯು ಒಂದು ಪ್ರದೇಶದಲ್ಲಿ ಕಾಣಿಸಿಕೊಂಡಿತೆಂದರೆ ಆ ಬಗ್ಗೆ ಮಾಧ್ಯಮಗಳಲ್ಲಿ ಸುದ್ದಿ-ವರದಿ-ವಿವಾದಗಳಷ್ಟೇ ಪ್ರಕಟವಾಗುವುದಲ್ಲ, ಅದರ ನಿಗ್ರಹಕ್ಕೆ ಬೇಕಾದ ಕ್ರಮಗಳನ್ನೂ ವ್ಯವಸ್ಥೆ ಕೈಗೊಳ್ಳುತ್ತದೆ. ಡೆಂಗ್ಯೂ, ಚಿಕೂನ್‌ಗುನ್ಯಾ, ಮಂಗನ ಕಾಯಿಲೆ ಸಹಿತ ಯಾವುದೇ ರೋಗಗಳು ಕಾಣಿಸಿಕೊಳ್ಳಲಿ, ನಮ್ಮನ್ನಾಳುವವರು ಅತ್ಯಂತ ತುರ್ತಾಗಿ ಮುನ್ನೆಚ್ಚರಿಕೆಯ ಕ್ರಮಗಳನ್ನು ಕೈಗೊಳ್ಳುತ್ತಾರೆ. ಕಾಯಿಲೆ ಪೀಡಿತ ಪ್ರದೇಶಗಳಿಗೆ ಸೊಳ್ಳೆ ನಿಗ್ರಹ ರಾಸಾಯನಿಕವನ್ನು ಸಿಂಪಡಿಸುವ ವ್ಯವಸ್ಥೆ ಮಾಡುತ್ತಾರೆ. ರೋಗಿಗಳಿಗೆ ಸೂಕ್ತ

ಔಷಧಿಯ ಏರ್ಪಾಟು ಮಾಡುವುದರ ಜೊತೆಗೇ ರೋಗ ಹರಡದಂತೆ ಸೂಕ್ತ ಕ್ರಮಗಳನ್ನೂ ಕೈಗೊಳ್ಳುತ್ತಾರೆ. ಒಂದು ರೀತಿಯಲ್ಲಿನ್ನು ರೋಗಕ್ಕೆ ಮಾತ್ರ ಮದ್ದು ಮಾಡುವುದಲ್ಲ, ರೋಗದ ಮೂಲವನ್ನೇ ಕತ್ತರಿಸಿ ಹಾಕುವ ಪ್ರಯತ್ನವನ್ನು ಕೈಗೊಳ್ಳಲಾಗುತ್ತದೆ. ಆದ್ದರಿಂದಲೇ ಮನೆಯ ಸುತ್ತ-ಮುತ್ತಲಿರುವ ನೀರು ನಿಲ್ಲಬಹುದಾದ ಸಣ್ಣ ಸಣ್ಣ ಗುಂಡಿ, ತಗ್ಗು ಜಾಗಗಳು, ಗೆರಟೆ, ಟೈರುಗಳ ಬಗ್ಗೆ ಎಚ್ಚರಿಕೆ ವಹಿಸುವಂತೆ ಮತ್ತು ಅಲ್ಲೆಲ್ಲಾ ನೀರು ನಿಲ್ಲದಂತೆ ನೋಡಿಕೊಳ್ಳಿ ಎಂದು ಟಿ.ವಿ ಮತ್ತು ಪತ್ರಿಕಾ ಜಾಹೀರಾತುಗಳ ಮೂಲಕ ಸರಕಾರ ಮನವಿ ಮಾಡಿಕೊಳ್ಳುತ್ತದೆ. ರೋಗಕ್ಕೆ ಔಷಧ ಕೊಡುವುದರ ಜೊತೆಗೇ ರೋಗದ ಮೂಲವನ್ನೇ ಕಡಿದು ಹಾಕುವುದು ಇವೆಲ್ಲದರ ಉದ್ದೇಶ. ಆದರೆ ಮದ್ಯಪಾನದ ಕುರಿತಂತೆ ಇಂಥ ಆದೇಶಗಳು ಹೊರ ಬೀಳುವುದೇ ಇಲ್ಲವೇಕೆ? 1957ರ ಇಂಡಿಯನ್ ಕಾಪಿರೈಟ್ ಕಾಯ್ದೆಯ 51, 62, 63ರ ಪ್ರಕಾರ ಮದ್ಯಪಾನವು ಕಾನೂನು ವಿರೋಧಿಯಾಗಿದ್ದರೂ ಆ ಕಾಯ್ದೆಯೇಕೆ ದೇಶಾದ್ಯಂತ ಏಕ ಪ್ರಕಾರವಾಗಿ ಜಾರಿಯ ಹಂತಕ್ಕೆ ಬಂದಿಲ್ಲ? ಕನಿಷ್ಠ ಇಂಥದ್ದೊಂದು ಕಾಯ್ದೆಗೆ ಭಾರತೀಯ ಸಂವಿಧಾನದಲ್ಲಿ ಅವಕಾಶವಿದೆಯೆಂಬ ಅರಿವು ಎಷ್ಟು ಮಂದಿಗಿದೆ? ಈ ಅರಿವನ್ನು ನಾಗರಿಕರಲ್ಲಿ ಉಂಟು ಮಾಡಬೇಕಾದುದು ಯಾರು? ಮಲೇರಿಯಾ, ಡೆಂಗ್ಯೂಗಳ ವಿರುದ್ಧ ಪತ್ರಿಕಾ ಜಾಹೀರಾತು, ಅದು-ಇದುಗಳನ್ನು ತರಾತುರಿಯಿಂದ ಹೊರಡಿಸುವ ಸರಕಾರಗಳು ಮದ್ಯವಿರೋಧಿ ಕಾಯ್ದೆ ಮತ್ತು ಮದ್ಯಪಾನದ ಅನಾಹುತಗಳ ಬಗ್ಗೆ ಜನಜಾಗೃತಿ ಮೂಡಿಸುವಲ್ಲಿ ಅದೇ ಬಗೆಯ ಮುತುವರ್ಜಿಯನ್ನು ತೋರುತ್ತಿಲ್ಲವೇಕೆ? ಹಬ್ಬ-ಹರಿದಿನಗಳ ಸಂದರ್ಭದಲ್ಲಿ, ಚುನಾವಣೆ, ಗಾಂಧಿ ಜಯಂತಿ ಮುಂತಾದ ಸಂದರ್ಭಗಳಲ್ಲೆಲ್ಲಾ ಮದ್ಯ ಮಾರಾಟಕ್ಕೆ ನಿಷೇಧ ವಿಧಿಸಲಾಗುತ್ತದೆ. ಶಾಲಾ-ಕಾಲೇಜುಗಳ ಸನಿಹ ಮದ್ಯ ಮಾರಾಟಕ್ಕೆ ನಿಷೇಧವಿದೆ. ಏನಿವೆಲ್ಲ? ಮದ್ಯವು ಸಮಾಜದ ಆರೋಗ್ಯವನ್ನು ಕೆಡಿಸುತ್ತದೆ ಎಂಬ ಕಾರಣದ ಹೊರತು ಬೇರೆ ಇನ್ನಾವ ಕಾರಣಗಳನ್ನು ಇದಕ್ಕೆ ಕೊಡಲು ಸಾಧ್ಯ? ಹಬ್ಬ ಮತ್ತು ಚುನಾವಣೆಯ ಕಾಲದಲ್ಲಿ ಮದ್ಯ ಅನಾಹುತ ಮಾಡಬಲ್ಲುದಾದರೆ ಉಳಿದ ದಿನಗಳಲ್ಲಿ ಅದು ಹಾನಿ ಮಾಡಲಾರದು ಎಂದು ನಮ್ಮ ವ್ಯವಸ್ಥೆ ತೀರ್ಮಾನಕ್ಕೆ ಬಂದಿರುವುದು ಯಾವ ಮಾನದಂಡದಲ್ಲಿ?

ಮದ್ಯಪಾನವು ವರ್ಷಂಪ್ರತಿ ಸಾವಿರಾರು ಮಂದಿಯ ಸಾವಿಗೆ, ಲಕ್ಷಾಂತರ ಮಂದಿಯ ಅನಾರೋಗ್ಯಕ್ಕೆ, ಅಂಗ ವೈಕಲ್ಯಕ್ಕೆ, ಅಪಘಾತಕ್ಕೆ, ಅತ್ಯಾಚಾರ, ಲೈಂಗಿಕ ಹಲ್ಲೆಗಳಿಗೆ ಕೊಲೆ-ದರೋಡೆಗಳಿಗೆ ಕಾರಣವಾಗುತ್ತಿದೆ. ಇವತ್ತು ಈ ದೇಶದಲ್ಲಿ ನಡೆಯುತ್ತಿರುವ ವ್ಯಾಪಕ ಪ್ರಮಾಣದ ಅತ್ಯಾಚಾರಗಳಿಗೂ ಮದ್ಯಕ್ಕೂ ಬಿಡಿಸಲಾಗದ ನಂಟಿದೆ. ಹೆಚ್ಚಿನೆಲ್ಲ ಅತ್ಯಾಚಾರಿಗಳು ಮದ್ಯಪಾನಿಗಳಾಗಿರುವುದು ಪ್ರತಿದಿನ ವರದಿಗಳಾಗುತ್ತಿವೆ. ಇವಲ್ಲದೇ ಈ ದೇಶದ ಕೋಟ್ಯಂತರ ಬಡವರ ಮನೆಗಳು ಕುಡುಕ ಗಂಡಂದಿರ ಕಾರಣದಿಂದಾಗಿ ನರಕಸದೃಶವಾಗಿವೆ. ಸಂಜೆಯಾಗದಿರಲಿ ಎಂದು ಪ್ರಾರ್ಥಿಸುವ ಪತ್ನಿ-ಮಕ್ಕಳ ದೊಡ್ಡ ಸಮೂಹವೇ ಈ ದೇಶದಲ್ಲಿ ನಿರ್ಮಾಣವಾಗಿದೆ. ಸಂಜೆ ಅಪ್ಪ ಕುಡಿದು ಬರುತ್ತಾನೆ, ವಿನಾಕಾರಣ ತಾಯಿಗೆ, ನಮಗೆ ಹೊಡೆಯುತ್ತಾನೆ ಎಂಬ ಮಕ್ಕಳ ದೂರುಗಳು ಎಷ್ಟು ಮಾಮೂಲಿ ಆಗಿವೆ ಎಂದರೆ ಅವು

ಮಾಧ್ಯಮಗಳಲ್ಲಿ ಸುದ್ದಿಯೂ ಆಗುತ್ತಿಲ್ಲ. 2011ರಲ್ಲಿ ಮುಂಬೈಯ ಮೇಲೆ ಭಯೋತ್ಪಾದಕ ದಾಳಿ ನಡೆಯಿತು. ಸುಮಾರು 184 ಮಂದಿ ಈ ದಾಳಿಯಲ್ಲಿ ಸಾವಿಗೀಡಾದರು. ಹೇಮಂತ್ ಕರ್ಕರೆ, ಸಾಲಸ್ಕರ್ ಮುಂತಾದ ಪ್ರಭಾವಿ ಪೋಲಿಸ್ ಅಧಿಕಾರಿಗಳನ್ನು ಈ ದೇಶ ಕಳಕೊಂಡಿತು. ಆ ಸಂದರ್ಭದಲ್ಲಿ ನಮ್ಮ ದೇಶವು ಪಾಕಿಸ್ತಾನದ ವಿರುದ್ಧ ಎಷ್ಟರ ಮಟ್ಟಿಗೆ ಆಕ್ರೋಶಗೊಂಡಿತ್ತೆಂದರೆ, ಗಡಿಯಲ್ಲಿ ಸೇನೆಯನ್ನು ನಿಯೋಜಿಸಿತು. ಪಾಕ್‌ನೊಂದಿಗಿನ ಎಲ್ಲ ಸಂಬಂಧವನ್ನೂ ಸ್ಥಗಿತಗೊಳಿಸಿತು. ರಾಯಭಾರಿಯನ್ನು ಹಿಂದಕ್ಕೆ ಕರೆಸಿತು. ಒಂದು ರೀತಿಯಲ್ಲಿ, ಭಾರತ ಮತ್ತು ಪಾಕ್‌ಗಳ ಮಧ್ಯೆ ಯುದ್ಧ ಸ್ಥಿತಿ ನಿರ್ಮಾಣವಾಯಿತು. ಎರಡು ಕಡೆಯ ಸೈನಿಕರು ಯುದ್ಧ ಭೀತಿಯಲ್ಲಿ ಹಲವು ದಿನ-ರಾತ್ರಿಗಳನ್ನು ಕಳೆದರು. ಯುದ್ಧದ ಅಗತ್ಯ ಮತ್ತು ಅನಗತ್ಯಗಳ ಸುತ್ತ ಮಾಧ್ಯಮಗಳು ಗಂಭೀರ ಚರ್ಚೆಯಲ್ಲಿ ತೊಡಗಿಕೊಂಡವು. ಈ ಎಲ್ಲ ಬೆಳವಣಿಗೆಗಳಿಗೆ 184 ಮಂದಿಯ ಪ್ರಾಣ ಮತ್ತು ದಾಳಿಯು ಕಾರಣವಾಗಿತ್ತು. ಆದರೆ ಒಂದೆರೆಡು ದಿನಗಳ ಆ ದಾಳಿ ಮತ್ತು 184 ಮಂದಿಯ ಸಾವನ್ನು ಒಂದು ದೇಶದ ವಿರುದ್ಧ ಸಮರ ಸಾರುವಷ್ಟು ಗಂಭೀರ ಪ್ರಕರಣವಾಗಿ ಪರಿಗಣಿಸುವ ನಮ್ಮ ವ್ಯವಸ್ಥೆಯು ಪ್ರತಿ ದಿನ ಸಾವಿರಾರು ಮಂದಿಯ ಮೇಲೆ ದಾಳಿ ನಡೆಸುವ ಮತ್ತು ಪ್ರತಿದಿನ ನೂರಾರು ಮಂದಿಯ ಮೇಲೆ ಹಲ್ಲೆ, ಹಿಂಸೆ, ಅತ್ಯಾಚಾರ ನಡೆಸುವ ಹಾಗೂ ವರ್ಷಂಪ್ರತಿ ಸಾವಿರಾರು ಮಂದಿಯ ಹತ್ಯೆ ನಡೆಸುವ ಮದ್ಯಪಾನದ ವಿರುದ್ಧವೇಕೆ ಸಮರ ಸಾರುತ್ತಿಲ್ಲ? ಮುಂಬೈ ಮೇಲಿನ ದಾಳಿಯು ಸ್ವಾಭಿಮಾನ!, ಸಾರ್ವಭೌಮತ್ವದ ಮೇಲಿನ ಹಲ್ಲೆಯಾಗಿರುವಂತೆಯೇ ಹೆಣ್ಣಿನ ಮೇಲಿನ ಅತ್ಯಾಚಾರ ಪ್ರಕರಣಗಳೂ ಸ್ವಾಭಿಮಾನದ ಪ್ರಶ್ನೆಯೇ ಅಲ್ಲವೇ? ಯುವ ಸಮೂಹ ಎಂಬ ಅಮೂಲ್ಯ ಸಂಪತ್ತನ್ನು ಅಮಲಿನಲ್ಲಿ ಕಳೆದು ಹೋಗುವಂತೆ ಮಾಡುವ ಮದ್ಯ ತಯಾರಕ ಕಂಪೆನಿಗಳು ಮಾಡುತ್ತಿರುವುದು ನಮ್ಮ ಸಾರ್ವಭೌಮತ್ವದ ಮೇಲೆ ದಾಳಿಯನ್ನೇ ಅಲ್ಲವೇ? ಯಾಕೆ ನಮ್ಮ ಸರಕಾರಗಳು ಈ ಬಗೆಯ ಹೋಲಿಕೆಯನ್ನು ಮಾಡುತ್ತಿಲ್ಲ? ಮುಂಬೈಯಲ್ಲಿ ಕಳೆದು ಹೋದ 184 ಮಂದಿಯ ಪ್ರಾಣಕ್ಕಿಂತ ಈ ದೇಶದ ತುಂಬೆಲ್ಲಾ ಕಳೆದು ಹೋಗುವ ಸಾವಿರಾರು ಮಂದಿಯ ಪ್ರಾಣ ಯಾವ ರೀತಿಯಲ್ಲಿ ಅಗ್ಗವಾಗುತ್ತದೆ?

## ಮದ್ಯ ವ್ಯಾಪಾರ ಹಾಗೂ ತಯಾರಿಕೆ

ಮದ್ಯ ವ್ಯಾಪಾರವು ಇಷ್ಟು ಸಂಘಟಿತವಾಗಿ ಈ ದೇಶದಲ್ಲಿ ವ್ಯಾಪಿಸಿರುವುದರ ಕೀರ್ತಿಯು ಪೋರ್ಚುಗೀಸ್-ಬ್ರಿಟಿಷ್ ಸಾಮ್ರಾಜ್ಯ ಶಾಹಿತ್ವಕ್ಕೆ ಸಲ್ಲಬೇಕು. ಮದ್ಯದಂಗಡಿಗಳು ಪ್ರಾರಂಭವಾದದ್ದು ಬ್ರಿಟೀಷರ ಆಡಳಿತ ಕಾಲದಲ್ಲಿ, ಮಾತ್ರವಲ್ಲ, ಈ ಅಂಗಡಿಗಳನ್ನು ನಿಯಂತ್ರಿಸಲು ಅಬಕಾರಿ ತೆರಿಗೆ ಪ್ರಾರಂಭಿಸಿದ್ದೂ ಬ್ರಿಟಿಷರೇ. 1790ರಲ್ಲಿ ಅಬಕಾರಿ ತೆರಿಗೆ ನಿಯಮ ಜಾರಿಗೊಳ್ಳುವ ಮೂಲಕ ಮದ್ಯ ತಯಾರಿಸುವ ಅಧಿಕಾರ ಸರಕಾರಕ್ಕೆ ಮಾತ್ರ ಇದೆ ಎಂಬ ಕಾನೂನು ಜಾರಿಗೆ ಬಂತು. 1905ರಲ್ಲಿ ಸರಕಾರದ ನೇತೃತ್ವದಲ್ಲಿ ಸಾರಾಯಿ ಭಟ್ಟಿ ಇಳಿಸುವ ಕಾರ್ಖಾನೆಗಳನ್ನು (Distillery) ಸ್ಥಾಪಿಸಲಾಯಿತು. ಹೀಗೆ ಮದ್ಯವನ್ನು ಪರಿಚಯಿಸಿದ

ಮತ್ತು ಅದನ್ನು ಒಂದು ಆದಾಯ ಮೂಲವಾಗಿಸಿಕೊಂಡು ಸರಕಾರ ನಡೆಸಬಹುದು ಎಂದು ಕಲಿಸಿಕೊಟ್ಟ ಬ್ರಿಟಿಷರು 1947ರಲ್ಲಿ ಈ ದೇಶದಿಂದ ಕಾಲ್ಕಿತ್ತರೂ ಮದ್ಯ ಅವರೊಂದಿಗೆ ಹೋಗದಂತೆ ನಮ್ಮ ಆಡಳಿತಗಾರರು ತಡೆದರು. ಗಾಂಧೀಜಿಯ ಮದ್ಯವಿರೋಧಿ ನಿಲುವನ್ನು ಅತ್ಯಂತ ಜಾಣತನದಿಂದ ಬದಿಗಿರಿಸಿ ಆದಾಯ ಮೂಲದ ಸಮರ್ಥನೆಯೊಂದಿಗೆ ಮದ್ಯದ ಮಾರುಕಟ್ಟೆಯನ್ನು ವಿಸ್ತರಿಸಿದರು. 'ಮದ್ಯ ತಯಾರಿಸಬೇಡಿ, ಮದ್ಯ ಕುಡಿಯಬೇಡಿ, ಮದ್ಯ ಮಾರಬೇಡಿ' ಎಂದ ಕೇರಳದ ನಾರಾಯಣ ಗುರು ಅವರನ್ನು ಅಣಕಿಸುವಂತೆ ಇವತ್ತು ಕೇರಳದಲ್ಲಿ ಮದ್ಯ ಮಾರಾಟ ಇದೆ. 2014 ಆಗಸ್ಟ್‌ನಲ್ಲಿ ಕೇರಳ ಸರಕಾರವು ಮದ್ಯವನ್ನು ನಿಷೇಧಿಸುವ (ಅದರಲ್ಲೂ ಬೇರೆ ಬೇರೆ ವಿಭಾಗಗಳಿವೆ, ಎಲ್ಲವನ್ನೂ ನಿಷೇಧಿಸಲಾಗುತ್ತಿಲ್ಲ) ಬಗ್ಗೆ ಘೋಷಣೆ ಹೊರಡಿಸಿದರೂ ಅದರ ವಿರುದ್ಧ ಕೇರಳ ಹೈಕೋರ್ಟ್ ತಡೆಯಾಜ್ಞೆ ತಂದಿದೆ. ಒಂದು ರೀತಿಯಲ್ಲಿ ಕೇರಳ ಸಾಕ್ಷರ ರಾಜ್ಯ. ಅತ್ಯಂತ ಹೆಚ್ಚು ಅಕ್ಷರಸ್ಥರು ಕೇರಳಿಗರಾಗಿದ್ದಾರೆ. ಆದರೆ ಇವತ್ತು ಇಡೀ ದೇಶದಲ್ಲೇ ಅತ್ಯಂತ ಹೆಚ್ಚು ಕುಡುಕರಿರುವುದೂ ಕೇರಳದಲ್ಲೇ. ಜಗತ್ತಿನಲ್ಲಿಯೇ ಅತ್ಯಂತ ಹೆಚ್ಚು ಮದ್ಯಪಾನಿಗಳಿರುವ ಪ್ರದೇಶವಾಗಿಯೂ ಕೇರಳ ಗುರುತಿಸಿಕೊಂಡಿದೆ. ಸಾಮಾನ್ಯವಾಗಿ ವರ್ಷವೊಂದಕ್ಕೆ 2,800 ಕೋಟಿ ರೂಪಾಯಿಯನ್ನು ಅಕ್ಕಿ ಖರೀದಿಸುವುದಕ್ಕಾಗಿ (2011ರ ವರದಿ) ಖರ್ಚು ಮಾಡುವ ಕೇರಳಿಗರು ಮದ್ಯ ಖರೀದಿಸುವುದಕ್ಕಾಗಿ 12,000 ಕೋಟಿ ರೂಪಾಯಿಗಳನ್ನು ಖರ್ಚು ಮಾಡುತ್ತಾರೆ. ಈ ಹಿಂದೆ ಅಕ್ಕಿಗಿಂತ ಮದ್ಯಕ್ಕೆ ಹೆಚ್ಚು ಖರ್ಚು ಮಾಡುವ ರಾಜ್ಯವಾಗಿ ಪಂಜಾಬ್ ಗುರುತಿಸಿಕೊಂಡಿತ್ತು. ಅಬಕಾರಿ ಇಲಾಖೆಯ ಪ್ರಕಾರ ಕೇರಳದಲ್ಲಿ 10 ಕೋಟಿ ಲೀಟರ್ ವಿದೇಶಿ ಮದ್ಯ ಮತ್ತು 80 ಕೋಟಿ ಲೀಟರ್ ದೇಶೀಯ ಮದ್ಯವು ವರ್ಷಂಪ್ರತಿ ಖರ್ಚಾಗುತ್ತಿದೆ. 2007ರ ಓಣಂ ಹಬ್ಬದ ಸಂದರ್ಭದಲ್ಲಿ 250 ಕೋಟಿ ರೂಪಾಯಿಯ ಮದ್ಯ ಖರ್ಚಾಗಿತ್ತು. ವಿಶೇಷ ಏನೆಂದರೆ, 100 ರೂಪಾಯಿಯ ಮದ್ಯದ ಬಾಟಲಿಗೆ ತಗಲುವ ಉತ್ಪಾದನಾ ವೆಚ್ಚ ಬರೀ 10 ರೂಪಾಯಿ. ಹಾಗಂತ ಯಾರಾದರೂ ಈ ಮದ್ಯ ಜಗತ್ತಿನ ಉತ್ಪಾದನಾ ಕ್ಷೇತ್ರದ ಒಳಗೆ ಇಣುಕಿದರೆ ಅಚ್ಚರಿ ಮತ್ತು ಆಘಾತದ ಫಲಿತಾಂಶಗಳೇ ಎದುರಾಗುತ್ತವೆ. ಮದ್ಯಪಾನಿಗಳಿಗೆ ಬಹುತೇಕ ಗೊತ್ತಿಲ್ಲದ ಮತ್ತು ಗೊತ್ತಾದರೆ ಮದ್ಯದಂಗಡಿಗಳ ಮುಂದೆ ಪ್ರತಿಭಟನೆಗೆ ಕೂರುವಷ್ಟು ಆಸಕ್ತಿಕರವಾದ ಸಂಗತಿಗಳು ಅಲ್ಲಿವೆ. ಸರಕಾರಗಳು ಪ್ರತಿ ವರ್ಷ ಮದ್ಯದ ಮೇಲಿನ ತೆರಿಗೆಯನ್ನು ಅತ್ಯಧಿಕ ಪ್ರಮಾಣದಲ್ಲಿ ಏರಿಸುತ್ತಿದ್ದರೂ ಯಾಕೆ ಮದ್ಯಪಾನಿಗಳಾಗಲಿ, ಉತ್ಪಾದಕ ಕಂಪೆನಿಗಳಾಗಲಿ ತುಟಿಪಿಟಕ್ಕೆನ್ನದೆ ಸಹಿಸಿಕೊಳ್ಳುತ್ತವೆ ಅನ್ನುವುದಕ್ಕೆ ಸಾಕಷ್ಟು ಪುರಾವೆಗಳು ಅಲ್ಲಿಂದ ಲಭ್ಯವಾಗುತ್ತವೆ.

ಮದ್ಯ ತಯಾರಿಕೆ ಅನ್ನುವುದೇ ಒಂದು ಲಾಭದಾಯಕ ಉದ್ಯಮ. ಅದು ಯಾವ ಪ್ರಮಾಣದ ಲಾಭ ಎಂದರೆ, ಅಷ್ಟೊಂದು ಲಾಭ ಇರುವ ಇನ್ನೊಂದು ಕ್ಷೇತ್ರ ಇರಲಾರದು. ಅಕ್ಕಿಯ ಬಗ್ಗೆ ಸಮಾಜಕ್ಕೆ ಚೆನ್ನಾಗಿ ಗೊತ್ತಿದೆ. ಅದು ಅಕ್ಕಿಯಾಗಿ ಗುರುತಿಸಿ ಕೊಳ್ಳುವುದಕ್ಕಿಂತ ಮುಂಚೆ ಯಾವೆಲ್ಲ ಹಂತಗಳನ್ನು ದಾಟಿ ಬರಬೇಕಾಗುತ್ತದೆ ಎಂಬ ಬಗ್ಗೆ ಸ್ಪಷ್ಟ ಅರಿವು ಜನರಲ್ಲಿರುತ್ತದೆ.

ರೈತನೋರ್ವ ನೇಗಿಲಿನ ಮೂಲಕ ಗದ್ದೆಯನ್ನು ಹದಗೊಳಿಸುವುದರಿಂದ ಹಿಡಿದು ಬೀಜ ಬಿತ್ತನೆ, ನೀರಾವರಿ, ಕೊಯ್ಲುಗಳನ್ನು ದಾಟಿ ಅದು ಮಾರುಕಟ್ಟೆ ಪ್ರವೇಶಿಸುವ ಹಂತದವರೆಗೆ ಅದರ ಪ್ರತಿಯೊಂದು ಹಂತವೂ ಶ್ರಮವೂ ಖರೀದಿದಾರನ ಮುಂದಿರುತ್ತದೆ. ಪ್ರತಿ ವರ್ಷವೂ ರೈತ ಸುದ್ದಿಯಲ್ಲಿರುತ್ತಾನೆ. ಮಳೆ ಹೆಚ್ಚು ಬಂದರೆ ಅತಿವೃಷ್ಟಿಯಾಗುತ್ತದೆ. ಕಡಿಮೆಯಾದರೆ ಅನಾವೃಷ್ಟಿ. ಬಿತ್ತನೆ ಬೀಜದ ಸಮಸ್ಯೆ ಒಂದೆಡೆಯಾದರೆ ರಸಗೊಬ್ಬರ ಸಮಸ್ಯೆ ಇನ್ನೊಂದು ಕಡೆ. ಕೆಲವೊಮ್ಮೆ ಈ ಎಲ್ಲ ಹಂತಗಳು ಸುಗಮವಾಗಿ ಸಾಗಿದರೂ ಮಾರುಕಟ್ಟೆಯಲ್ಲಿ ಮಧ್ಯವರ್ತಿಗಳು ಮತ್ತು ದಾಸ್ತಾನುದಾರರು ಮಾಡುವ ಬುದ್ಧಿವಂತಿಕೆಯಿಂದಾಗಿ ಶ್ರಮಕ್ಕೆ ಬೆಲೆ ಸಿಗದ ಪರಿಸ್ಥಿತಿ. ಇದು ಕೇವಲ ಭತ್ತ ಬೆಳೆಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಟೊಮೆಟೊ, ಈರುಳ್ಳಿ, ಬಟಾಟೆ, ಬೇಳೆಕಾಳು... ಸಹಿತ ಹೆಚ್ಚಿನೆಲ್ಲ ಬೆಳೆಗಳ ಮತ್ತು ಅದನ್ನು ಬೆಳೆದಾತನ ಸಮಸ್ಯೆ. ಆದರೆ ಮದ್ಯ ಉತ್ಪಾದನೆಯು ಇಂಥದ್ದೊಂದು ಸಮಸ್ಯೆಯೊಂದಿಗೆ ಎಂದಾದರೂ ಬೀದಿಗೆ ಬಂದದ್ದಿದೆಯೇ? ಮದ್ಯದ ಉತ್ಪಾದಕರು– ತಮಗೆ ಮಾರುಕಟ್ಟೆಯಲ್ಲಿ ಅನ್ಯಾಯವಾಗುತ್ತದೆ ಎಂದೋ ಉತ್ಪಾದನಾ ವೆಚ್ಚ ಹೆಚ್ಚಾಗುತ್ತಿದೆ ಎಂದೋ ಅಥವಾ ಸೂಕ್ತ ಮಾರುಕಟ್ಟೆ ಮೌಲ್ಯವನ್ನು ನಿಗದಿಪಡಿಸಿ ಎಂದೋ ಒತ್ತಾಯಿಸಿ ಪ್ರತಿಭಟನೆ ನಡೆಸಿದ್ದಿದೆಯೇ? ಸರಕಾರವು ಏರಿಸುವ ತೆರಿಗೆಯನ್ನು ಪ್ರತಿವರ್ಷವೂ ಸ್ವಾಗತಿಸುವ ಕ್ಷೇತ್ರವೊಂದಿದ್ದರೆ ಅದು ಮದ್ಯಲೋಕ ಮಾತ್ರ ಎಂಬುದಕ್ಕೆ ಕಾರಣಗಳೇನು?

ಅಂದಹಾಗೆ, ಮದ್ಯ ಉತ್ಪಾದನಾ ಕ್ಷೇತ್ರದಲ್ಲಿ ಅಭೂತಪೂರ್ವ ಲಾಭವನ್ನು ಗಿಟ್ಟಿಸಿಕೊಡುವ ವಸ್ತುವಿನ ಹೆಸರೇ ಸ್ಪಿರಿಟ್. ಸಕ್ಕರೆಗಾಗಿ ಕಬ್ಬನ್ನು ಬಳಸಿದ ಬಳಿಕ ಸಿಗುವ ಜೊಳ್ಳಿಗೆ ಇಕ್ಷುರಸ (Molasses) ಎನ್ನುತ್ತಾರೆ. ಈ ಇಕ್ಷುರಸಕ್ಕೆ ಪದಾರ್ಥವೊಂದನ್ನು ಸೇರಿಸಿ ಕಾರ್ಖಾನೆಯಲ್ಲಿ ಭಟ್ಟಿ ಇಳಿಸಲಾಗುತ್ತದೆ. ಆಗ ಸಿಗುವ ವಸ್ತುವೇ ಸ್ಪಿರಿಟ್. ಸಾಕಷ್ಟು ಚೆನ್ನಾಗಿ ಭಟ್ಟಿ ಇಳಿಸಿದ ಸ್ಪಿರಿಟ್ ಅನ್ನು ಎಕ್ಸ್ಟ್ರಾ ನ್ಯೂಟ್ರಲ್ ಆಲ್ಕೊಹಾಲ್ ಎನ್ನುತಾರೆ. ಭಾರತದಲ್ಲಿ ತಯಾರಿಸಲಾಗುವ ವಿದೇಶಿ ಮದ್ಯಕ್ಕೆ ಇದನ್ನು ಬಳಸಲಾಗುತ್ತದೆ. 35 ಲೀಟರ್‌ನ 365 ಟಿನ್ನುಗಳಿರುವ ಒಂದು ಲೋಡ್ ಸ್ಪಿರಿಟ್‌ಗೆ (35 X 365= 12,775 ಲೀಟರ್) ಸರಾಸರಿ ಬೆಲೆ 3 ಲಕ್ಷ ರೂಪಾಯಿ (2008ರ ಲೆಕ್ಕಾಚಾರ). ಹಾಗಂತ, ಇದನ್ನು ಕರ್ನಾಟಕದಿಂದ ಕೇರಳಕ್ಕೆ ಅಥವಾ ಇನ್ನಿತರ ರಾಜ್ಯಗಳಿಗೆ ಸಾಗಿಸಬೇಕಾದರೆ ಲಂಚ, ಮಾಮೂಲಿಗಳೆಲ್ಲ ಕೊಡಲೇಬೇಕಾಗುತ್ತದೆ. ಈ ಲಂಚದ ಪ್ರಮಾಣವೇ 70 ಲಕ್ಷ ರೂಪಾಯಿ ಎಂದು ಹೇಳಲಾಗುತ್ತದೆ. ಹೀಗೆ ಒಂದು ಲೋಡ್ ಸ್ಪಿರಿಟ್ ಕರ್ನಾಟಕದಿಂದ ಕೇರಳಕ್ಕೆ ತಲುಪಬೇಕಾದರೆ ಸಾಮಾನ್ಯವಾಗಿ 10 ಲಕ್ಷ ರೂಪಾಯಿ ಅಂದಾಜು ವೆಚ್ಚ ತಗಲುತ್ತದೆ. ಒಂದು ಲೀಟರ್ ಸ್ಪಿರಿಟ್‌ನಿಂದ 3 ಲೀಟರ್ ಸಾರಾಯಿಯನ್ನು ತಯಾರಿಸಲಾಗುತ್ತದೆ. ಹೀಗೆ ಒಂದು ಲೋಡ್ ಸ್ಪಿರಿಟ್‌ನಿಂದ 38,325 ಲೀಟರ್ ಸಾರಾಯಿಯನ್ನು ತಯಾರಿಸಲಾಗುತ್ತದೆ. ಅಷ್ಟಕ್ಕೂ, ಒಂದು ಲೀಟರ್ ಸಾರಾಯಿಯ ಬೆಲೆ 200 ರೂಪಾಯಿ. ಹೀಗೆ ಒಂದು ಲೀಟರ್ ಸಾರಾಯಿಗೆ 200 ರೂಪಾಯಿಯಂತೆ 38,325 ಲೀಟರ್ ಸಾರಾಯಿಗೆ (38,325 X 200) 76 ಲಕ್ಷದ 65 ಸಾವಿರ ರೂಪಾಯಿಯಾಗುತ್ತದೆ. ಇದರಲ್ಲಿ 10 ಲಕ್ಷ ರೂಪಾಯಿ ವೆಚ್ಚವನ್ನು ಕಳೆದರೆ 66 ಲಕ್ಷದ 65 ಸಾವಿರ ರೂಪಾಯಿ ಲಾಭ ಸಿಗುತ್ತದೆ.

# ವ್ಯವಸ್ಥೆಯ ಹಿಪಾಕ್ರಸಿ

1931ರಲ್ಲಿ ಗಾಂಧೀಜಿಯವರು ತಮ್ಮ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಹೀಗೆ ಬರೆದಿದ್ದರು-

'ನಾನು ಭಾರತದ ಪ್ರಧಾನಿಯಾಗಿ ಒಂದು ಗಂಟೆಯ ಅವಧಿಗೆ ಮಾತ್ರ ನಿಯುಕ್ತನಾಗುವುದಾದರೆ ಈ ದೇಶದಿಂದ ಮದ್ಯವನ್ನು ಸಂಪೂರ್ಣವಾಗಿ ನಿಷೇಧಿಸುವುದಕ್ಕೆ ಮೊದಲ ಆದ್ಯತೆಯನ್ನು ನೀಡುತ್ತೇನೆ. ಮಾತ್ರವಲ್ಲ, ಈ ನಿಷೇಧದಿಂದ ಉಂಟಾಗುವ ಅಬಕಾರಿ ತೆರಿಗೆಯ ಖೋತಾವನ್ನು ತುಂಬಲು ರಕ್ಷಣಾ ವೆಚ್ಚವನ್ನು ಕಡಿಮೆ ಮಾಡುತ್ತೇನೆ.'

ಅಮೇರಿಕದ ಖ್ಯಾತ ಬರಹಗಾರ ಮತ್ತು ಚಿಂತಕ ಡಾ। ರಾಬರ್ಟ್ಸನ್ ಹೇಳುತ್ತಾರೆ-

'ಒಂದು ವೇಳೆ ಮದ್ಯ ಮತ್ತು ಪಾನ್‌ನಂಥ ಅಂಗಡಿಗಳಲ್ಲಿ ಅರ್ಧದಷ್ಟನ್ನು ಮುಚ್ಚಿದರೆ ಈ ಜಗತ್ತಿನಲ್ಲಿರುವ ಅರ್ಧದಷ್ಟು ಆಸ್ಪತ್ರೆ ಮತ್ತು ಜೈಲುಗಳು ಮುಚ್ಚುಗಡೆಯಾದೀತು.'

ನಮ್ಮಲ್ಲೊಂದು ವಿಶಿಷ್ಟ ಪದ್ಧತಿಯಿದೆ. ಮದ್ಯವು ಆರೋಗ್ಯಕ್ಕೆ ಹಾನಿಕರ ಎಂದು ಯಾವುದಾದರೂ ಕೆಲವು ಸ್ವಯಂ ಸೇವಾ ಸಂಘಟನೆಗಳು, ಕೆಲವು ಧಾರ್ಮಿಕ ಸಂಸ್ಥೆಗಳು ಅಥವಾ ಧರ್ಮಗುರುಗಳು ಮಾತ್ರ ಹೇಳುತ್ತಿರುವುದಲ್ಲ, ಸರಕಾರವೇ ಮದ್ಯವು ಆರೋಗ್ಯಕ್ಕೆ ಹಾನಿಕರ ಅನ್ನುತ್ತದೆ. ಈ ಬಗ್ಗೆ ನಮ್ಮ ವ್ಯವಸ್ಥೆಗೆ ಎಷ್ಟರ ಮಟ್ಟಿಗೆ ಖಚಿತತೆ ಇದೆಯೆಂದರೆ ಮದ್ಯದ ಬಾಟಲಿಗಳಲ್ಲೇ ಇದನ್ನು ಅಚ್ಚು ಹಾಕಲಾಗುತ್ತದೆ. ಸಿಗರೇಟು ಪ್ಯಾಕ್‌ನಲ್ಲಿ ಮಾನವನ ಅಸ್ಥಿಪಂಜರದ ಫೋಟೋ ಹಾಕಲಾದರೆ ಪ್ರತಿ ಮದ್ಯ ಬಾಟಲುಗಳಲ್ಲಿ 'ಆರೋಗ್ಯಕ್ಕೆ ಹಾನಿಕರ' ಎಂಬ ಬರಹವನ್ನು ಮುದ್ರಿಸಿರುತ್ತಾರೆ. ಸಾರ್ವಜನಿಕರು ಸೇರುವ ಸ್ಥಳಗಳಲ್ಲಿ, ಸರಕಾರಿ ಕಚೇರಿಗಳ ಎದುರು, ಜಿಲ್ಲಾಧಿಕಾರಿ ಕಚೇರಿಯ ಆಸುಪಾಸಿನಲ್ಲಿ ಮತ್ತು ಎಲ್ಲರೂ ದೃಷ್ಟಿ ಬೀರಬಹುದಾದ ಸಾಮಾನ್ಯ ಜನವಸತಿ ಪ್ರದೇಶಗಳಲ್ಲಿ ಕುಡಿತದ ವಿರುದ್ಧ ಸರಕಾರವೇ ಬೃಹತ್ ಫ್ಲೆಕ್ಸ್‌ಗಳನ್ನು ಹಾಕುತ್ತದೆ. ಕುಡಿತದಿಂದಾಗಿ ಪತ್ನಿ, ಮಕ್ಕಳು ಬೀದಿ ಪಾಲಾಗುವ ಬಗ್ಗೆ, ಹಸಿವಿನ ಹೊಟ್ಟೆಯ ಬಗ್ಗೆ ಚಿತ್ರ ಸಹಿತ ಜಾಹೀರಾತುಗಳನ್ನೂ ಮುದ್ರಿಸುತ್ತದೆ. ಸಿನಿಮಾಗಳಲ್ಲಿ ಮದ್ಯದ ದೃಶ್ಯ ಪ್ರದರ್ಶನವಾಗುವ ವೇಳೆ 'ಮದ್ಯ ಆರೋಗ್ಯಕ್ಕೆ ಹಾನಿಕರ' ಎಂಬ ಬರಹವನ್ನೂ ಪ್ರಸಾರ ಮಾಡುತ್ತದೆ. ಆದರೆ ಇದೇ ಸರಕಾರ ಅಬಕಾರಿ ಎಂಬ ಖಾತೆಯನ್ನೂ ಹುಟ್ಟುಹಾಕಿ ನಿರ್ವಹಿಸುತ್ತಿದೆ. ಇದಕ್ಕಿಂತ ದ್ವಂದ್ವ ಇನ್ನಾವುದಿದೆ? ಒಂದು ಕಡೆ ಮದ್ಯ ಕುಡಿಯಬೇಡಿ ಅನ್ನುವ ಸರಕಾರ, ಮಾತ್ರವಲ್ಲ ಹಾಗೆ ಸಾರ್ವಜನಿಕರನ್ನು ಎಚ್ಚರಗೊಳಿಸುವುದಕ್ಕಾಗಿ ವರ್ಷಗಟ್ಟಲೆ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡುವ ಸರಕಾರವು ಇನ್ನೊಂದು ಕಡೆ ಅದೇ ಅನಾರೋಗ್ಯಕರ ವಸ್ತುವನ್ನು ಸರಬರಾಜು ಮಾಡುತ್ತಿರುವುದು ಏನನ್ನು ಸೂಚಿಸುತ್ತದೆ? ಅದಕ್ಕಾಗಿ ಒಂದು ಖಾತೆಯನ್ನೇ ಹುಟ್ಟು ಹಾಕಿರುವುದರ ಅರ್ಥವೇನು? ಅನಾರೋಗ್ಯಕರ ಖಾತೆಯೊಂದು ನಮ್ಮ ಸಚಿವ ಸಂಪುಟದಲ್ಲಿ ಏಕಿರಬೇಕು? ಸಾರ್ವಜನಿಕರ ಆರೋಗ್ಯವನ್ನು ಒಂದು ಪಾನೀಯವು ಕೆಡಿಸುತ್ತದೆ ಎಂಬ ಬಗ್ಗೆ ಒಂದು ಸರಕಾರಕ್ಕೆ ಖಚಿತವಿದ್ದರೆ ಮತ್ತೇಕೆ

ಸರಕಾರ ಅದನ್ನು ಸರಬರಾಜು ಮಾಡುತ್ತಿದೆ? ಅವುಗಳ ಉತ್ಪಾದನೆಗೆ ಪರವಾನಿಗೆ ನೀಡುತ್ತಿದೆ? ಪ್ರಜೆಗಳ ಆರೋಗ್ಯವನ್ನು ಕಾಪಾಡಬೇಕಾದ ಮತ್ತು ಅವರನ್ನು ಅನಾರೋಗ್ಯ ಕಾಡದಂತೆ ಸಕಲ ಕ್ರಮಗಳನ್ನು ಕೈಗೊಳ್ಳಬೇಕಾದ ಹೊಣೆಗಾರಿಕೆಯಿರುವ ಸರಕಾರಗಳು ಅನಾರೋಗ್ಯವನ್ನು ಹರಡುವ ಪಾನೀಯದ ಬಾಟಲಿಯಲ್ಲಿ 'ಆರೋಗ್ಯಕ್ಕೆ ಹಾನಿಕರ' ಎಂದು ಬರೆದ ಮಾತ್ರಕ್ಕೇ ಜವಾಬ್ದಾರಿ ಮುಗಿಯುತ್ತದೆಯೇ! ಒಂದು ವೇಳೆ ಇದುವೇ ಜನರ ಆರೋಗ್ಯವನ್ನು ಕಾಪಾಡುವ ಸರಿಯಾದ ವಿಧಾನ ಎಂದಾದರೆ ಮಲೇರಿಯಾ, ಕಾಲುಬಾಯಿ ರೋಗ, ಏಡ್ಸ್, ಡಯಾಬಿಟೀಸ್ ಸಹಿತ ಹತ್ತಾರು ರೋಗಗಳ ಬಗ್ಗೆ ಆಯಾ ಔಷಧಿಗಳ ಮೇಲೆ 'ರೋಗದ ಬಗ್ಗೆ ಜಾಗರೂಕತೆ ಇರಲಿ' ಎಂಬ ಎಚ್ಚರಿಕೆಯ ಬರಹವನ್ನು ಮುದ್ರಿಸಿದರೆ ಸಾಲದೇ? ಬೇಕಾದರೆ ಮದ್ಯದ ಕುರಿತಂತೆ ಫ್ಲೆಕ್ಸ್‌ಗಳನ್ನು ಹಾಕಿದಂತೆ ಅಲ್ಲಲ್ಲಿ ಈ ರೋಗಗಳ ಬಗ್ಗೆಯೂ ಫ್ಲೆಕ್ಸ್‌ಗಳನ್ನು ಹಾಕಲಿ. ಅದರ ಹೊರತಾದ ಕ್ರಮಗಳನ್ನು ಕೈಗೊಳ್ಳಬೇಕೆಂದಿಲ್ಲವಲ್ಲ. ಆದರೆ ಮಲೇರಿಯಾ, ಡೆಂಗ್ಯೂ ಅಥವಾ ಇನ್ನಿತರ ರೋಗಗಳ ಕುರಿತಂತೆ ಸರಕಾರ ಈ ಮಾದರಿಯನ್ನು ಅನುಸರಿಸುವುದೇ ಇಲ್ಲ. ಔಷಧಿಗಳನ್ನು ಸರಬರಾಜು ಮಾಡುವುದರ ಜೊತೆಗೇ ಊರು, ಕೇರಿ, ಪ್ರದೇಶಗಳಲ್ಲಿ ಮತ್ತು ಮಾಧ್ಯಮ ಜಾಹೀರಾತುಗಳ ಮೂಲಕ ಜನಜಾಗೃತಿ ಮೂಡಿಸುತ್ತದೆ. ಪ್ರತಿ ಮನೆ ಕೇರಿಗಳಿಗೂ ತೆರಳಿ ರಾಸಾಯನಿಕಗಳನ್ನು ಸಿಂಪಡಿಸುವುದಕ್ಕೆ ವ್ಯವಸ್ಥೆ ಮಾಡುತ್ತದೆ. ರೋಗಗಳು ಹೇಗೆ ಹರಡುತ್ತದೆ ಮತ್ತು ಯಾವ್ಯಾವ ಉಪಕ್ರಮಗಳನ್ನು ಕೈಗೊಂಡರೆ ಅದರ ನಿರ್ಮೂಲನೆ ಸಾಧ್ಯ ಎಂಬ ಬಗ್ಗೆ ಜನರಿಗೆ ಮನವರಿಕೆ ಮಾಡಿಸುತ್ತದೆ. ಮಾತ್ರವಲ್ಲ, ಇಂಥ ರೋಗಗಳನ್ನು ಹರಡುವ ಸೊಳ್ಳೆಗಳನ್ನು ಅದು ಎಂದೂ ಮಾರಾಟ ಮಾಡುವುದಿಲ್ಲ. ಇಲ್ಲೆಲ್ಲಾ ಸರಕಾರದ ಕ್ರಮಗಳಲ್ಲಿ ಒಂದು ಸ್ಪಷ್ಟ ಮತ್ತು ಖಚಿತ ಧೋರಣೆಯಿದೆ. ಅದೇನೆಂದರೆ, ರೋಗಕ್ಕೆ ಮಾತ್ರವಲ್ಲ, ರೋಗ ಮೂಲಕ್ಕೂ ಮದ್ದು ಅರೆಯಬೇಕು ಎಂಬುದು. ಮತ್ತೇಕೆ ಮದ್ಯದ ವಿಷಯದಲ್ಲಿ ಸರಕಾರ ಈ ಮಾದರಿಯನ್ನು ಅನುಸರಿಸುತ್ತಿಲ್ಲ? ಬಾಟ್ಲಿಯಲ್ಲಿ ಬರೆಯುವ ಬದಲು ಈ ಅನಾರೋಗ್ಯಕಾರಿ ಪಾನೀಯವನ್ನು ಮೂಲದಿಂದಲೇ ಕಿತ್ತು ಹಾಕಲು ಯಾಕೆ ಸರಕಾರಗಳು ಮುಂದಾಗುತ್ತಿಲ್ಲ? ಆರೋಗ್ಯವನ್ನು ಕೆಡಿಸುವ ಪಾನೀಯವನ್ನು ಜನರ ಕೈಗಿತ್ತು 'ಕುಡೀಬೇಡಿ' ಎಂಬ ಜಾಣತನ ತೋರುವುದಕ್ಕೆ ಮದ್ಯ ಕೊಡುವ ಆದಾಯವೇ ಕಾರಣ ಎಂದಾದರೆ ಆ ಆದಾಯದಿಂದ ಆಗುವ ಅಭಿವೃದ್ಧಿ ಕಾರ್ಯಗಳು ಎಷ್ಟು ಜನಪರ ಆಗಬಹುದು? ಶಾಲಾ ಶಿಕ್ಷಕರಿಗೆ ಮತ್ತು ಇನ್ನಿತರ ಸರಕಾರಿ ಅಧಿಕಾರಿಗಳಿಗೆ ಸಂಬಳ ಕೊಡಲು ಅಬಕಾರಿ ಆದಾಯವನ್ನು ಬಳಸಲಾಗುತ್ತದೆ ಎಂದು ಈ ಹಿಂದೆ ಅಬಕಾರಿ ಸಚಿವ ರೇಣುಕಾಚಾರ್ಯ ಹೇಳಿದ್ದರು (2010ರಲ್ಲಿ). ಶಿಕ್ಷಕ ವೃತ್ತಿಯು ಅತ್ಯಂತ ಪಾವನವಾದುದು. ಒಂದು ತಲೆಮಾರಿನ ಆಲೋಚನೆ, ಆರೋಗ್ಯ, ಅಭಿರುಚಿ, ವೈಚಾರಿಕತೆಯನ್ನು ರೂಪಿಸುವಂಥದ್ದು. ನೈತಿಕ ಮೌಲ್ಯ, ಪ್ರಾಮಾಣಿಕತೆ, ಅಮಲು ಮುಕ್ತತೆ, ಸದಭಿರುಚಿ ಮುಂತಾದವುಗಳ ಪಾಠ ಹೇಳುವ ಜಾಗವದು. ಆದರೆ ಇಂಥ ಪಾವನ ಮತ್ತು ಮೌಲ್ಯ ನಿಷ್ಠ ಕೆಲಸ ಮಾಡುವ ಅಧ್ಯಾಪಕರಿಗೆ ಅಮಲಿನಿಂದ ಬಂದ ಆದಾಯದಿಂದ ಸಂಬಳ ಕೊಡಲಾಗುತ್ತದೆಂದರೆ ಏನೆನ್ನಬೇಕು? ಅಸಂಖ್ಯ ಮಂದಿಯ ಅನಾರೋಗ್ಯವನ್ನು ಅಂಟಿಸುವ,

ಅಸಂಖ್ಯ ಗುಡಿಸಲುಗಳ ಕಣ್ಣೀರಿಗೆ ಕಾರಣವಾಗುವ, ಅಸಂಖ್ಯ ಮಂದಿಗೆ ಅಂಗವೈಕಲ್ಯಕ್ಕೆ, ಸಾವಿಗೆ, ಅವಮರ್ಯಾದೆಗೆ, ಅತ್ಯಾಚಾರಕ್ಕೆ ಕಾರಣವಾಗುವ ಒಂದು ಪಾನೀಯದ ಆದಾಯವು ಶಿಕ್ಷಕರ ಹೊಟ್ಟೆಯನ್ನು ತಣಿಸುತ್ತದೆ ಎನ್ನುವುದು ಎಷ್ಟರ ಮಟ್ಟಿಗೆ ನೈತಿಕತೆಯೆನಿಸುತ್ತದೆ?

ಇನ್ನೊಂದು ಸ್ವಾರಸ್ಯಕರ ವಿಷಯವೇನೆಂದರೆ, ಅಬಕಾರಿ ಎಂಬ ಹೆಸರು. ಸರಕಾರದ ಸಂಪುಟದಲ್ಲಿರುವ ಇತರೆಲ್ಲ ಖಾತೆಗಳನ್ನೊಮ್ಮೆ ಜ್ಞಾಪಿಸಿಕೊಳ್ಳಿ. ಕೃಷಿ ಖಾತೆ, ಹಣಕಾಸು ಖಾತೆ, ಗೃಹ ಖಾತೆ, ಆರೋಗ್ಯ ಖಾತೆ, ಕ್ರೀಡಾ ಖಾತೆ, ಗ್ರಾಮೀಣಾಭಿವೃದ್ಧಿ ಖಾತೆ, ಅರಣ್ಯ ಖಾತೆ... ಹೀಗೆ ಎಲ್ಲ ಖಾತೆಗಳ ಹೆಸರು ಎಷ್ಟು ಸ್ಪಷ್ಟವಾಗಿ ಮತ್ತು ಪರಿಚಿತ ಭಾಷೆಯಲ್ಲಿದೆಯೆಂದರೆ ಅದನ್ನು ಓದುವಾಗಲೇ ಅದು ಇಂಥ ವಿಷಯಕ್ಕೆ ಸಂಬಂಧಿಸಿದ್ದು ಎಂಬುದು ಥಟ್ಟನೆ ಗೊತ್ತಾಗುತ್ತದೆ. ನಿಜವಾಗಿ ಈ ಸಮಾಜ ಯಾವುದನ್ನು ಯಾವ ಹೆಸರಲ್ಲಿ ಸಂಬೋಧಿಸುತ್ತದೋ ಅದೇ ಹೆಸರಿನಲ್ಲಿ ಎಲ್ಲ ಖಾತೆಗಳನ್ನು ರಚಿಸಲಾಗಿದೆ. ಆದರೆ ಅಬಕಾರಿ ಎಂದರೇನು? ಆ ಹೆಸರು ಸಾರ್ವಜನಿಕವಾಗಿ ಚಾಲ್ತಿಯಲ್ಲಿದೆಯೇ? ಅಬಕಾರಿ ಸುಂಕ ಅಂದರೆ ಥಟ್ಟನೆ ಇಂಥದ್ದೇ ಎಂದು ಹೇಳಲಾಗದಷ್ಟು ಅಪರಿಚಿತತೆಯೊಂದು ಆ ಪದದಲ್ಲಿದೆ. ಮದ್ಯವನ್ನು ಕುಡಿಸುವ ಈ ಖಾತೆಗೆ ಅಬಕಾರಿ ಎಂಬ ಅಪರಿಚಿತ ಮತ್ತು ಅನಾರೋಗ್ಯವನ್ನು ತೋರ್ಪಡಿಸದಂಥ ಹೆಸರನ್ನು ಸರಕಾರ ಕೊಡಲು ಕಾರಣವೇನು? ಕೆಲಸ ಅನಾರೋಗ್ಯವನ್ನು ಹಂಚುವುದಾದರೂ ಹೆಸರು ಮಾತ್ರ ಅಂಥ ಸೂಚನೆಯನ್ನು ನೀಡದಂಥ ಅಬಕಾರಿ ಎಂಬುದು. ಯಾಕೆ ಸರಕಾರ ಕುಡುಕರ ಖಾತೆ ಅಥವಾ ಮದ್ಯಪಾನದ ಖಾತೆ ಅಥವಾ ಅನಾರೋಗ್ಯಕರ ಖಾತೆ ಎಂಬೆಲ್ಲ ಸುಪರಿಚಿತ ಹೆಸರುಗಳನ್ನು ಈ ಖಾತೆಗೆ ಇಡಲಿಲ್ಲ? ಬಹುಶಃ ಈ ಖಾತೆಯ ಬಗ್ಗೆ ನಮ್ಮ ವ್ಯವಸ್ಥೆಗೇ ಒಂದು ಬಗೆಯ ಮುಜುಗರವಿದೆ. ಕುಡಿಸುವ ಖಾತೆಯೊಂದನ್ನು ಸರಕಾರ ನಿರ್ವಹಿಸುತ್ತಿದೆ ಎಂಬ ಹಣೆಪಟ್ಟಿಯನ್ನು ತಗಲಿಸಿಕೊಳ್ಳಲು ಅದು ಇಷ್ಟಪಡುತ್ತಿಲ್ಲವೇನೋ.

## ಇಸ್ಲಾಮೀ ದೃಷ್ಟಿಕೋನ

ಪ್ರವಾದಿ ಮುಹಮ್ಮದ್(ಸ) ಅವರು ಶರಾಬಿಗೆ ಸಂಬಂಧಿಸಿ 10 ಮಂದಿಯನ್ನು ಶಪಿಸಿದ್ದಾರೆ- (ವರದಿ-ಅನಸ್(ರ): ತಿರ್ಮಿದಿ)

1. ಶರಾಬಿಗೆ ಅಗತ್ಯವಾದ ವಸ್ತುಗಳನ್ನು ಕೊಯ್ಯುವವರು (ಸಂಗ್ರಹಿಸುವವರು)
2. ಶರಾಬು ತಯಾರಿಸುವವರು
3. ಕುಡಿಯುವವರು
4. ಕುಡಿಸುವವರು
5. ಸರಬರಾಜು ಮಾಡುವವರು
6. ಯಾರಿಗಾಗಿ ಸರಬರಾಜು ಮಾಡಲಾಗುತ್ತದೋ ಅವರು
7. ಮಾರಾಟ ಮಾಡುವವರು

8. ಖರೀದಿಸುವವರು
9. ಉಡುಗೊರೆಯಾಗಿ ನೀಡುವವರು
10. ಅದರ ವರಮಾನದಿಂದ ಬದುಕುವವರು

ಪ್ರವಾದಿ ಮುಹಮ್ಮದ್(ಸ) ಅವರು ಮದ್ಯಕ್ಕೆ ಸಂಬಂಧಿಸಿ ಬಡವ-ಶ್ರೀಮಂತ, ಪ್ರಭಾವಿ-ಸಾಮಾನ್ಯ, ಬಿಳಿಯ-ಕರಿಯ, ಹೆಣ್ಣು-ಗಂಡು ಎಂಬ ವಿಭಜನೆಯನ್ನು ಮಾಡಲಿಲ್ಲ. ಅದರ ಖರೀದಿದಾರರು ಮತ್ತು ಸಂತ್ರಸ್ತರು ಯಾರ್‍ಯಾರು ಎಂಬುದನ್ನು ಪ್ರತ್ಯೇಕಿಸಿ ಕೆಲವರು ಕುಡಿಯಬಹುದು ಮತ್ತು ಕೆಲವರಿಗೆ ಮಾತ್ರ ನಿಷಿದ್ಧ ಎಂಬ ಪಕ್ಷಪಾತವನ್ನು ಮಾಡಲಿಲ್ಲ. ಬಡವ ಹೇಗೆ ಕುಡಿಯಬಾರದೋ ಅಷ್ಟೇ ತಾಕೀತಿನೊಂದಿಗೆ ಶ್ರೀಮಂತನೂ ಕುಡಿಯಬಾರದು ಎಂಬ ಕಠಿಣ ಆದೇಶವನ್ನು ನೀಡಿದರು. ಪವಿತ್ರ ಕುರ್‌ಆನ್ ಮದ್ಯವನ್ನು ಹೊಲಸು ಮತ್ತು ಪೈಶಾಚಿಕ ವಸ್ತುವಾಗಿದೆ ಎಂದಿತು. ಮದ್ಯ ಮತ್ತು ಸತ್ಯವಿಶ್ವಾಸ ಜೊತೆಗಿರಲು ಸಾಧ್ಯವಿಲ್ಲ ಎಂದು ಪ್ರವಾದಿ(ಸ) ಘೋಷಿಸಿದರು. ಇಲ್ಲೆಲ್ಲಾ ಮದ್ಯವನ್ನು ಬಡತನಕ್ಕೆ ಕಾರಣವಾಗುವ ವಸ್ತು, ಆದ ಕಾರಣದಿಂದ ಅದನ್ನು ವರ್ಜಿಸಬೇಕು ಎಂದು ಹೇಳಿಲ್ಲ. ಬಡತನ-ಶ್ರೀಮಂತಿಕೆಯ ಪ್ರಸ್ತಾಪವನ್ನೇ ಮಾಡದೇ ಮದ್ಯ ಹೊಲಸು ಎನ್ನಲಾಯಿತು. ಅದನ್ನು ವರ್ಜಿಸಬೇಕಾದುದಕ್ಕೆ ಕಾರಣ ಅದು ಹೊಲಸು, ಅಮಲು, ದ್ವೇಷ, ವೈರತ್ವವನ್ನು ಉಂಟುಮಾಡುವ ಪೇಯ ಎಂಬುದೇ ಆಗಿದೆ. ಪವಿತ್ರ ಕುರ್‌ಆನ್ ಹೇಳುತ್ತದೆ- **''ಶೈತಾನನು ಮದ್ಯ ಮತ್ತು ಜೂಜಿನ ಮೂಲಕ ನಿಮ್ಮೊಳಗೆ ವೈರತ್ವ ಮತ್ತು ದ್ವೇಷವನ್ನುಂಟು ಮಾಡಲಿಕ್ಕೂ ನಿಮ್ಮನ್ನು ಅಲ್ಲಾಹನ ಸ್ಮರಣೆಯಿಂದಲೂ ನಮಾಝ್‌ನಿಂದಲೂ ತಡೆಯಲಿಕ್ಕೂ ಇಚ್ಛಿಸುತ್ತಾನೆ. ಇನ್ನಾದರೂ ನೀವು ಅವುಗಳನ್ನು ತ್ಯಜಿಸುವಿರಾ?''**

**(ಪವಿತ್ರ ಕುರ್‌ಆನ್, 5:91)**

ಪ್ರವಾದಿ ಮುಹಮ್ಮದ್(ಸ) ಮದ್ಯಪಾನದ ಕುರಿತಂತೆ ಅತೀವ ಸಹನೆಯಿಂದ ಸಮಾಜವನ್ನು ವೀಕ್ಷಿಸಿದರು. ಅವರು ಬೆಳೆದ ಸಮಾಜ ಹೇಗಿತ್ತೆಂದರೆ, ಮದ್ಯ ಆ ಸಮಾಜದ ಅವಿಭಾಜ್ಯ ಅಂಗವಾಗಿತ್ತು. ಅದು ಇಲ್ಲದೆ ಬದುಕು ಮತ್ತು ಜೀವನಕ್ರಮವನ್ನು ಊಹಿಸುವುದು ಅಸಾಧ್ಯವೆಂಬಂಥ ವಾತಾವರಣವೊಂದು ಅವರ ಕಾಲದಲ್ಲಿ ನಿರ್ಮಾಣವಾಗಿತ್ತು. ಈಗಿನ ನೈಟ್ ಪಾರ್ಟಿಗಳಂತೆ, ಡ್ಯಾನ್ಸ್ ಬಾರ್‌ಗಳಂತೆ ಮದ್ಯ ಸಹಿತ ಭೋಜನ ಕೂಟಗಳು, ಮದುವೆ ಮಂಟಪಗಳು ಅಥವಾ ಗ್ರಾಮೀಣ ಆಟಗಳು ನಡೆಯುವುದು ತೀರಾ ಮಾಮೂಲಿಯಾಗಿತ್ತು. ಪುರಾತನ ಅರಬರು ಮದ್ಯವನ್ನು ಅಪಾರವಾಗಿ ಪ್ರೀತಿಸುತ್ತಿದ್ದರು. ಎಲ್ಲಿಯವರೆಗೆಂದರೆ, ಸಾವಿನ ಸನಿಹದಲ್ಲಿರುವ ವ್ಯಕ್ತಿಗಳು ತಮ್ಮ ಸಮಾಧಿಯ ಮೇಲೆ ದ್ರಾಕ್ಷಿಯ ಗಿಡಗಳನ್ನು ನೆಡುವಂತೆ ಉಯಿಲು ಬರೆಯುತ್ತಿದ್ದರು. ಯಾಕೆಂದರೆ ಆ ಗಿಡ ಬೆಳೆದು ದೊಡ್ಡದಾದರೆ ಸಮಾಧಿಯೊಳಗೆ ತೂರಿಕೊಳ್ಳುವ ಅದರ ಬೇರುಗಳಿಂದ ದ್ರಾಕ್ಷಾರಸದ ಅನುಭವವನ್ನು ಹೀರಿ ಪಡಕೊಳ್ಳಬಹುದೆಂಬ ನಿರೀಕ್ಷೆ ಅವರಿಗಿತ್ತು. ಇಂಥ ಸಮಾಜವನ್ನು ಮದ್ಯರಹಿತ ಸಮಾಜವಾಗಿ ಬದಲಿಸುವುದು ಸುಲಭದ ಕೆಲಸವೇನೂ ಆಗಿರಲಿಲ್ಲ. ಊಟವನ್ನೂ ಪತ್ನಿ-ಮಕ್ಕಳನ್ನೂ ಎಲ್ಲವನ್ನೂ ಮದ್ಯಕ್ಕಾಗಿ ಬಿಟ್ಟುಬಿಡಬಲ್ಲ ಸಮಾಜವೊಂದನ್ನು ಮದ್ಯದ್ವೇಷಿ ಸಮಾಜವಾಗಿ ಪರಿವರ್ತಿಸಬೇಕಾದರೆ

ಸಹನೆಯ ನಡೆಯೊಂದು ಅನಿವಾರ್ಯವಾಗಿತ್ತು. ಪ್ರವಾದಿ ಮುಹಮ್ಮದ್(ಸ) ಅವರು ಮದ್ಯರಹಿತ ಸಮಾಜದ ನಿರ್ಮಾಣಕ್ಕಾಗಿ ಒಂದೊಂದೇ ಹೆಜ್ಜೆಗಳನ್ನು ಮುಂದಿಡುತ್ತಾ ಹೋದರು. ಒಮ್ಮೆಲೇ ಮದ್ಯವನ್ನು ನಿಷಿದ್ಧ ಎನ್ನದೇ ಅದರ ಅಪಾಯಗಳನ್ನು ಒಂದೊಂದಾಗಿ ಬೋಧಿಸುತ್ತಾ ಹೋದರು. ಆರಂಭದಲ್ಲಿ ನಮಾಝ್‌ಗೆ ಬರುವಾಗ ಮದ್ಯಪಾನಿಯಾಗಿ ಬರಬಾರದು ಎಂದು ಆಜ್ಞಾಪಿಸಿದರು. ಹೀಗೆ ಹಂತಹಂತವಾಗಿ ಜನರನ್ನು ತಿದ್ದುತ್ತಾ ಕೊನೆಗೆ ಸಂಪೂರ್ಣ ಮದ್ಯಪಾನ ನಿಷೇಧದ ದೇವವಚನವನ್ನು ಘೋಷಿಸಿದರು. ಆ ಘೋಷಣೆ ಹೇಗಿತ್ತೆಂದರೆ, ಜನರು ಮದ್ಯವನ್ನು ಹೊಳೆಯಂತೆ ಚೆಲ್ಲಿದರು. ಆ ಚೆಲ್ಲುವಿಕೆಯ ಪರಿಣಾಮವು ಇಡೀ ಮದೀನಾ ಪಟ್ಟಣದಲ್ಲೇ ಮದ್ಯವು ನೀರಿನಂತೆ ಹರಿದು ಹೋಯಿತು ಎನ್ನಲಾಗುತ್ತದೆ. ಪವಿತ್ರ ಕುರ್‌ಆನಿನ ಈ ಕಟು ಧೋರಣೆಯಿಂದಾಗಿ ಒಂದು ಕಾಲದ ಪರಮ ಮದ್ಯಪಾನಿಗಳಾಗಿದ್ದ ಅರಬರು ಮದ್ಯವನ್ನು ಬದುಕಿನ ಪರಮ ದ್ವೇಷದ ವಸ್ತುವಾಗಿ ಪರಿಗಣಿಸುವಷ್ಟು ಬದಲಾಗಿ ಹೋದರು. ಹೀಗೆ ಬಡವ-ಶ್ರೀಮಂತ ಸರ್ವರ ಪಾಲಿಗೂ ಮದ್ಯವನ್ನು ನಿಷಿದ್ಧಗೊಳಿಸಿದ ಇಸ್ಲಾಮ್, ಈ ನಿಷೇಧಕ್ಕೆ ಮದ್ಯದಲ್ಲಿರುವ ಅಪಾಯಕಾರಿ ಅಂಶಗಳನ್ನು ಕಾರಣವಾಗಿ ಕೊಟ್ಟಿತೇ ಹೊರತು ಬಡತನವನ್ನಲ್ಲ.

## ಬಡವ-ಶ್ರೀಮಂತ ಎಂಬ ಸಮೀಕರಣ

ದುರಂತ ಏನೆಂದರೆ, ಇವತ್ತು ಮದ್ಯಪಾನದ ಕುರಿತಂತೆ ಬಡತನ-ಶ್ರೀಮಂತಿಕೆಯ ಕಾರಣಗಳನ್ನು ನೀಡಲಾಗುತ್ತಿದೆ. ಶ್ರೀಮಂತರು ಕುಡಿಯುವುದರಿಂದ ಅಷ್ಟೇನೂ ತೊಂದರೆಯಿಲ್ಲ, ಬಡವರು ಕುಡಿದರೆ ಖರ್ಚು ಇನ್ನಷ್ಟು ಹೆಚ್ಚಿ ಮನೆ ನರಕವಾಗುತ್ತದೆ ಎಂಬ ವಾದವನ್ನು ಮುಂದಿಡಲಾಗುತ್ತಿದೆ. ಆದ್ದರಿಂದ ಬ್ರಾಂಡಿ, ವಿಸ್ಕಿ, ವೈನ್ ಇತ್ಯಾದಿಗಳನ್ನು ಹಾಗೆಯೇ ಉಳಿಸಿಕೊಂಡು ಬಡವರು ಕುಡಿಯುವ ಮದ್ಯವನ್ನು ನಿಷೇಧಿಸುವ ಮಾತುಗಳನ್ನು ಆಡಲಾಗುತ್ತದೆ. ಕರ್ನಾಟಕದಲ್ಲೂ ಈ ನಿಷೇಧ ಇದೆ. ನಿಜವಾಗಿ ಯಾವಾಗ ಮದ್ಯ ನಿಷೇಧಕ್ಕೆ ಬಡತನ-ಶ್ರೀಮಂತಿಕೆ ಎಂಬ ಟ್ಯಾಗನ್ನು ನೀಡಲಾಗುತ್ತದೋ ಆಗ ಅದರ ನಿಜ ಉದ್ದೇಶವೇ ಹಾಳಾಗಿ ಬಿಡುತ್ತದೆ. ಶ್ರೀಮಂತರಿಗಾಗಿ ಶ್ರೀಮಂತ ಮದ್ಯವನ್ನು ಉಳಿಸಿಕೊಂಡು ಬಡವರನ್ನು ಮಾತ್ರ ಅದರಿಂದ ದೂರ ಇರಿಸುವ ಹಾಗೂ ಮದ್ಯ ನಿಷೇಧ ಎಂಬ ಹೆಗ್ಗಳಿಕೆಯೊಂದಿಗೆ ಗುರುತಿಸಿಕೊಳ್ಳುವ ಅವಕಾಶವು ಒದಗುತ್ತದೆ. ಒಂದು ರೀತಿಯಲ್ಲಿ ಬಡತನಕ್ಕೆ ಮದ್ಯವೊಂದೇ ಕಾರಣವಾಗಿದ್ದರೆ ಗುಜರಾತ್, ಕರ್ನಾಟಕ, ಕೇರಳ, ಮಿಝೋರಾಂಗಳಲ್ಲಿ ಬಡವರೇ ಇರಬಾರದಿತ್ತು. ನಿಜವಾಗಿ, ಇಂಥ ಟೊಳ್ಳು ಕಾರಣಗಳನ್ನು ಮುಂದಿಡುತ್ತಿರುವುದು ಮದ್ಯದ ಲಾಬಿಗಳೇ. ಸಂಪೂರ್ಣ ಮದ್ಯ ನಿಷೇಧವಾಗದಂತೆ ತಡೆಯಬೇಕಾದರೆ ಇಂಥದ್ದೊಂದು ಲೆಕ್ಕಾಚಾರವನ್ನು ವ್ಯವಸ್ಥೆಯ ಮುಂದಿಡುವುದು ಅದಕ್ಕೆ ಅನಿವಾರ್ಯವಾಗಿದೆ. ಬಡವರ ಬಗ್ಗೆ ಶ್ರೀಮಂತರು (ಹೊಟ್ಟೆ ತುಂಬಿದವರು) ಮಾಡುವ ಆರೋಪ ಪಟ್ಟಿ ಇದು. ಬಡವರೇನು ಉಣ್ಣಬೇಕು, ಕುಡಿಯಬೇಕು, ನೋಡಬೇಕು, ಓದಬೇಕು ಎಂಬುದನ್ನೆಲ್ಲ ಬಡವರಲ್ಲದವರೇ

ಜಗತ್ತಿನೆಲ್ಲೆಡೆಯೂ ನಿರ್ಧರಿಸುತ್ತಾರೆ. ಇದೊಂದು ರೀತಿಯ ಅಧಿಕಾರ, ಅಂತಸ್ತು, ಆದಾಯದ ಹಿರಿತನ. ನಮ್ಮ ರಾಜ್ಯದಲ್ಲೂ ಇದೇ ಮಾದರಿಯ ಮದ್ಯ ನಿಷೇಧ ಇವತ್ತು ಜಾರಿಯಲ್ಲಿದೆ. ಬಡವರು ಕುಡಿದು ಹಾಳಾಗುತ್ತಾರೆಂದು ತೀರ್ಮಾನಿಸಿರುವ ಸರಕಾರವು (2010ರಲ್ಲಿ ಬಿಜೆಪಿ ಸರಕಾರ) ಅವರಿಗೆ ಸುಲಭದಲ್ಲಿ ಲಭ್ಯವಾಗುವ ಮದ್ಯವನ್ನು ನಿಲ್ಲಿಸಿ ಶ್ರೀಮಂತರ ಮದ್ಯವನ್ನು ಹಾಗೆಯೇ ಇರಗೊಟ್ಟಿದೆ. ಇದರಿಂದ ಆಗಿರುವ ಲಾಭ ಏನೆಂದರೆ ದುಬಾರಿ ಮದ್ಯಗಳು ಹೆಚ್ಚು ಮಾರಾಟ ಆಗುತ್ತಿರುವುದು. ಕುಡಿತದ ಚಟದಿಂದ ಹೊರಬರಲಾಗದ ಬಡವರು ದುಬಾರಿ ಬೆಲೆಯ ಮದ್ಯವನ್ನು ಖರೀದಿಸಿ ಕುಡಿಯುತ್ತಿದ್ದಾರೆ. ಇದರಿಂದ ಬಡವರ ಬಡತನ ಇನ್ನೂ ಹೆಚ್ಚಾಗುತ್ತಿದೆಯೆಂದು ವಾದಿಸುತ್ತಿರುವ ಹೊಸ ಸರಕಾರವು (2013 ರಿಂದ ಕಾಂಗ್ರೆಸ್‌ನ ಸಿದ್ಧರಾಮಯ್ಯ ಸರಕಾರ) ಅಗ್ಗದ ಮದ್ಯ ನೀಡಿ ಬಡವರ ಬಡತನ ಕಡಿಮೆ ಮಾಡುವ ಆಲೋಚನೆಯನ್ನು ಹೊರ ಹಾಕಿದೆ.

ಇದೊಂದು ರೀತಿಯಲ್ಲಿ ಅನುಕೂಲ ಶಾಸ್ತ್ರ ನಿಜವಾಗಿ, ಮದ್ಯವನ್ನು ಶ್ರೀಮಂತರು ಮತ್ತು ಬಡವರ ಮಧ್ಯೆ ಹಂಚಿಬಿಡುವುದೇ ತಪ್ಪು. ಮದ್ಯವು ಸ್ವಯಂ ಅನಾರೋಗ್ಯಕರ ಪಾನೀಯ ಆಗಿರುವಾಗ ಅದನ್ನು ಶ್ರೀಮಂತರ ಅನಾರೋಗ್ಯ ಮತ್ತು ಬಡವರ ಅನಾರೋಗ್ಯ ಎಂದೇಕೆ ವಿಭಜಿಸಬೇಕು? ಬಡತನವನ್ನು ಅದಕ್ಕೆ ತಳಕು ಹಾಕುವುದು ಇನ್ನೊಂದು ತಪ್ಪು. ಇದು ಸಂಪೂರ್ಣ ಮದ್ಯ ನಿಷೇಧವನ್ನು ಜಾರಿಗೆ ತರಲು ಇಷ್ಟವಿಲ್ಲದ ಸರಕಾರವೊಂದು ಕಂಡುಕೊಂಡಿರುವ ಬಳಸುದಾರಿ. ಬಡವರು ಬಡವರಾಗಿರುವುದು ಮತ್ತು ಬಡವರಾಗಿಯೇ ಮುಂದುವರಿಯುತ್ತಿರುವುದಕ್ಕೆ ಮದ್ಯವೊಂದೇ ಕಾರಣ ಎಂಬ ಗ್ರಹಿಕೆಯೇ ಅಸಮರ್ಥನೀಯ ವಾದುದು. ಮದ್ಯವು ಬಡತನಕ್ಕೆ ಕಾರಣವಾಗುತ್ತದೆ ಎಂದಾದರೆ, ಪ್ರಪಂಚದಲ್ಲಿ ಬಡವರೇ ತುಂಬಿರಬೇಕಿತ್ತು. ಯಾಕೆಂದರೆ ಈ ವ್ಯಸನ ಎಲ್ಲ ವರ್ಗಗಳಲ್ಲೂ ಬೇರೆ ಬೇರೆ ಪ್ರಮಾಣದಲ್ಲಿ ಇದೆ. ಮದ್ಯದ ಮೇಲೆ ಮಾಡುವ ಖರ್ಚಿನ ದೃಷ್ಟಿಯಿಂದ ನೋಡಿದರೆ ಶ್ರೀಮಂತರೆಲ್ಲ ಇಂದು ಬೀದಿ ಬದಿಯಲ್ಲಿ ಅಥವಾ ಜೋಪಡಿ ಪಟ್ಟಿಯಲ್ಲಿ ಇರಬೇಕಿತ್ತು. ಅವರು ಇವತ್ತು ದೊಡ್ಡ ಪ್ರಮಾಣದಲ್ಲಿ ಹಣವನ್ನು ಮದ್ಯಕ್ಕೆ ವೆಚ್ಚ ಮಾಡುತ್ತಿದ್ದಾರೆ. ಬಡವರು ನೂರಿನ್ನೂರು ಲೆಕ್ಕದಲ್ಲಿ ಮದ್ಯಕ್ಕೆ ಖರ್ಚು ಮಾಡುವಾಗ ಶ್ರೀಮಂತರು ಸಾವಿರ-ಲಕ್ಷಗಳ ಲೆಕ್ಕದಲ್ಲಿ ಖರ್ಚು ಮಾಡುತ್ತಿದ್ದಾರೆ. ಹಾಗಂತ ಇವರೆಲ್ಲ ಇದೇ ಕಾರಣದಿಂದ ತಮ್ಮ ಶ್ರೀಮಂತಿಕೆಯನ್ನು ಕಳಕೊಂಡು ಬೀದಿಗೆ ಬಿದ್ದ ದೊಡ್ಡ ಸುದ್ದಿಗಳೇನೂ ಬರುತ್ತಿಲ್ಲ. ಮಾತ್ರವಲ್ಲ, ಇವರನ್ನು ಕುಡಿತದಿಂದ ಹೊರತಂದು ರಕ್ಷಿಸಲು ವಿಸ್ಕಿ, ಬಿಯರ್, ವೈನ್‌ಗಳನ್ನು ಸರಕಾರ ನಿಷೇಧಿಸಿಯೂ ಇಲ್ಲ.

ಒಂದು ರೀತಿಯಲ್ಲಿ, ಮದ್ಯಕ್ಕೆ ಬಡತನವನ್ನು ತಳಕು ಹಾಕಿದ್ದು ಅನುಕೂಲಸ್ಥರು. ಕಳ್ಳಭಟ್ಟಿಯಲ್ಲಿ, ಸಾಮಾನ್ಯ ಜಗಳ, ಹಲ್ಲೆ, ಕೊಲೆಗಳಲ್ಲಿ ಭಾಗಿಯಾಗುವುದು ಈ ವರ್ಗಗಳಲ್ಲ. ಆದರೆ ಈ ಕಳ್ಳಭಟ್ಟಿ ಸಾವುಗಳು, ಮದ್ಯ ಸಂಬಂಧಿ ಅತ್ಯಾಚಾರ-ದೌರ್ಜನ್ಯಗಳು ಸಮಾಜದಲ್ಲಿ ಆಗಾಗ ಮದ್ಯದ ಸುತ್ತ ಚರ್ಚೆಗಳನ್ನು ಹುಟ್ಟು ಹಾಕುತ್ತಿವೆ. ಮದ್ಯವನ್ನು ಸಂಪೂರ್ಣ

ನಿಷೇಧಿಸುವಂತೆ ಆಗ್ರಹಗಳು ಕೇಳಿ ಬರುವುದಕ್ಕೆ ಇಂಥ ಪ್ರಕರಣಗಳು ಸರಕಾರವನ್ನು ಮತ್ತೆ ಮತ್ತೆ ಒತ್ತಾಯಿಸುತ್ತವೆ. ಇಂಥ ಸಂದರ್ಭಗಳಲ್ಲಿ ಮದ್ಯಪಾನಕ್ಕೆ ಸಂಪೂರ್ಣ ನಿಷೇಧ ಬಿದ್ದರೆ... ಎಂಬ ಭೀತಿಯೊಂದು ಅನುಕೂಲಸ್ಥ ವರ್ಗವನ್ನು ಸದಾ ಕಾಡುತ್ತಲಿರುತ್ತದೆ. ಸರಕಾರಕ್ಕಂತೂ ಆದಾಯದ ಭೀತಿಯಿರುತ್ತದೆ. ಇಂಥ ಸಂದರ್ಭಗಳಲ್ಲಿ ಬಡತನಕ್ಕೂ ಮದ್ಯಕ್ಕೂ ಸಂಬಂಧಗಳನ್ನು ಜೋಡಿಸಿ ಆಂಶಿಕ ಮದ್ಯ ನಿಷೇಧವೆಂಬ ಪರಿಹಾರವನ್ನು ತುರುಕಿಸಿ ಚರ್ಚೆಗೊಂದು ತಿರುವನ್ನು ಕೊಡಲಾಗುತ್ತದೆ. ಬಹುಶಃ ಬಡವರ ಮನೆಯ ಅನ್ನಕ್ಕೆ, ಜೋಪಡಿಗೆ, ಮಕ್ಕಳು-ಮಹಿಳೆಯರ ಬವಣೆಗೆ ಮದ್ಯ ಕನ್ನ ಕೊರೆಯುವಾಗ ಶ್ರೀಮಂತರ ದಾಂಪತ್ಯ ಬದುಕಿಗೆ, ನೈತಿಕ ಮಟ್ಟಕ್ಕೆ ಮತ್ತು ಪ್ರಾಮಾಣಿಕತೆಗೂ ಮದ್ಯ ಕನ್ನ ಕೊರೆಯುತ್ತದೆ. ಮುಖ್ಯವಾಗಿ ಮದ್ಯವು ಶ್ರೀಮಂತರು ಮತ್ತು ಬಡವರೆಂಬ ಭೇದವಿಲ್ಲದೆಯೇ ನೈತಿಕತೆಯ ಪ್ರಶ್ನೆಗಳನ್ನೆತ್ತುತ್ತದೆ. ಮದ್ಯಪಾನಿಗೆ ಮತ್ತು ಅದರಿಂದ ವಿಪರೀತ ಪ್ರಮಾಣದಲ್ಲಿ ಅಮಲು ಹತ್ತಿಸಿಕೊಂಡವನಿಗೆ ಸರಿ-ತಪ್ಪುಗಳಲ್ಲಿ ಪ್ರಜ್ಞೆ ಕಡಿಮೆ. ತಾಯಿ ಮತ್ತು ಪತ್ನಿಯ ನಡುವೆ ಅನೇಕ ಬಾರಿ ವ್ಯತ್ಯಾಸಗಳು ಕಾಣದಿರುವುದಿದೆ. ಅತ್ಯಾಚಾರದಲ್ಲಿ ಭಾಗಿಯಾಗಲು ಸಾಮಾನ್ಯ ಕುಡುಕನೋರ್ವನಿಗೆ ಮದ್ಯವು ಪ್ರಚೋದನೆ ಕೊಡುವಾಗ ಅನೈತಿಕತೆಯಲ್ಲಿ ತೊಡಗುವುದಕ್ಕೆ ಶ್ರೀಮಂತರನ್ನು ಅದು ಪ್ರಚೋದಿಸುತ್ತದೆ. ಕೊಲೆ, ಹಲ್ಲೆ, ದರೋಡೆ, ಅತ್ಯಾಚಾರಗಳಲ್ಲಿ ಭಾಗಿಯಾಗುವ ಶೇ.95 ಕ್ಕಿಂತಲೂ ಅಧಿಕ ಮಂದಿ ಮದ್ಯಪಾನಿಗಳಾಗಿರುತ್ತಾರೆ ಎಂಬುದು ಅಧಿಕೃತ ವರದಿ. ಹಾಗಂತ ಎಲ್ಲವೂ ಹಾಗೆ ಎಂದಲ್ಲ, ಆದರೆ ಕಾನೂನು ವಿರೋಧಿ ಮತ್ತು ಮೌಲ್ಯ ವಿರೋಧಿ ಕೃತ್ಯಗಳಲ್ಲಿ ಭಾಗಿಯಾಗುವವರು ಮದ್ಯವನ್ನು ತಮ್ಮ ಕೃತ್ಯಗಳಿಗೆ ಪ್ರಚೋದಕವಾಗಿ ಬಳಸಿಕೊಳ್ಳುತ್ತಾರೆ. ಕುಡಿತದ ಅಭ್ಯಾಸ ಇರುವವನು ಪ್ರತಿದಿನ ಅಮಲೇರುವಷ್ಟು ಕುಡಿಯಬೇಕೆಂದಿಲ್ಲ, ಆದರೆ ಸಂದರ್ಭವನ್ನು ಹೊಂದಿಕೊಂಡು ಈ ಕುಡಿತದಲ್ಲಿ ಏರುಪೇರು ಆಗಿಯೇ ಆಗುತ್ತದೆ. ಕಚೇರಿಯ ಕೆಲಸದ ಸಂದರ್ಭದಲ್ಲಿ, ಮನೆಯಲ್ಲಿ ಪತ್ನಿಯೊಂದಿಗಿನ ಮಾತುಕತೆಯ ವೇಳೆ, ಅಂಗಡಿಯವರೊಂದಿಗೆ, ಗೆಳೆಯರ ಜೊತೆ ಮಾತುಕತೆಯ ಸಂದರ್ಭದಲ್ಲಿ ಅಥವಾ ಬದುಕಿನ ಇನ್ನಿತರ ಸಂದರ್ಭಗಳಲ್ಲಿ ನಡೆಯುವ ಘಟನೆ, ಮಾತುಕತೆ-ಕೋಪ-ಆಕ್ರೋಶಗಳು ಕುಡಿತದ ಪ್ರಮಾಣದಲ್ಲಿ ಏರಿಳಿತಗೊಳಿಸುತ್ತಿರುತ್ತದೆ. ಈ ಏರಿಳಿತ ಕೇವಲ ಕುಡಿತಕ್ಕೆ ಮಾತ್ರ ನಿಲ್ಲುವುದಿಲ್ಲ, ಅದು ಆತನ ಮೇಲೂ ಪ್ರಭಾವ ಬೀರುತ್ತದೆ. ಆ ಪ್ರಭಾವವು ಮನೆಯಲ್ಲೂ ಕಚೇರಿಯಲ್ಲೂ ಬೀದಿಯಲ್ಲೂ ಅಂಗಡಿಯಲ್ಲೂ ಪ್ರದರ್ಶನವಾಗುವುದಕ್ಕೂ ಅವಕಾಶವಾಗುತ್ತದೆ. ಪತ್ನಿಯೊಂದಿಗೆ ಜಗಳ ಮಾಡಿದವ ಬಳಿಕ ಇತರ ಅವಕಾಶಗಳ ಕಡೆಗೆ ಮುಖ ಮಾಡಬಹುದು. ಕುಡಿತವು ಅಂಥ ಪ್ರಯತ್ನಗಳಿಗೆ ಧೈರ್ಯ ನೀಡಬಹುದು. ಅಂಗಡಿಯವರೊಂದಿಗೆ ಜಗಳ ಮಾಡಿದವ ಕುಡಿದು ಬಂದು ರಂಪ ತೆಗೆಯಬಹುದು. ಕಚೇರಿಯಲ್ಲಿ ಅವಮಾನವಾಯಿತೆಂದು ನಂಬಿದವ ಕುಡಿದ ಅಮಲಿನಲ್ಲಿ ಮೇಲಧಿಕಾರಿಯನ್ನು ಇರಿಯಬಹುದು. ಗೆಳೆಯರ ಕೊಲೆಗೂ ಕಾರಣವಾಗಬಹುದು. ಇನ್ನಿತರ ಸಮಾಜದ್ರೋಹಿ ಕೃತ್ಯಗಳಲ್ಲೂ ಭಾಗಿಯಾಗಬಹುದು. ಓರ್ವ ವ್ಯಕ್ತಿಯ ಪಾಲಿಗೆ ಇಷ್ಟವಿಲ್ಲದ ಅಥವಾ ಒಗ್ಗದ ಘಟನೆಗಳು ಜರುಗುವುದು ಬೇರೆ.

ಅದಕ್ಕೆ ಕಾನೂನುಬಾಹಿರ ರೀತಿಯಲ್ಲಿ ಅಥವಾ ಅತಿರೇಕವಾಗಿ ಪ್ರತಿಕ್ರಿಯಿಸುವುದು ಬೇರೆ. ಮದ್ಯವು ವ್ಯಕ್ತಿಯಲ್ಲಿ ಹುಂಬ ಧೈರ್ಯವನ್ನು ಪ್ರಚೋದಿಸುತ್ತದೆ. ಅತಿರೇಕದ ನಡೆಗಳಿಗೆ ಪುಸಲಾಯಿಸುತ್ತದೆ. ಹಾಗೆ ಮಾಡುವುದರಿಂದ ಮುಂದೆ ಆಗಬಹುದಾದ ಪರಿಣಾಮಗಳ ಬಗ್ಗೆ ಆಲೋಚಿಸದಂತೆ ಅದು ತಡೆಯುತ್ತದೆ. ಆದ್ದರಿಂದಲೇ ಹೆಚ್ಚಿನ ಸಿನಿಮಾಗಳಲ್ಲಿ ವಿಲನ್ ತನ್ನ ದ್ವೇಷವನ್ನೋ ಇಷ್ಟವನ್ನೋ ಸಾಧಿಸಲು ತೊಡಗುವ ಮೊದಲು ಮದ್ಯ ಸೇವಿಸುತ್ತಾನೆ. ಅದರಲ್ಲೊಂದು ಅಮಲು ಇದೆ. ಆ ಅಮಲು ಬಡವರ ಹೊಟ್ಟೆಯನ್ನೂ ಗುಡಿಸಲನ್ನೂ ಸುಟ್ಟರೆ, ಶ್ರೀಮಂತರ ನೈತಿಕತೆಯನ್ನೇ ಸುಡುತ್ತದೆ. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಮದ್ಯವು ಬಡವರ ವೈರಿಯಾಗಿ ಮಾತ್ರ ಗುರುತಿಸಿಕೊಳ್ಳುತ್ತದೆಯೇ ಹೊರತು ಶ್ರೀಮಂತರದ್ದಲ್ಲ.

## ಮದ್ಯ ಮತ್ತು ಮಾಧ್ಯಮ

ಮದ್ಯಪಾನದ ಕುರಿತಂತೆ ಈ ಜಗತ್ತಿನಲ್ಲಿ ಪೇರಿಸಿಡಲಾಗದಷ್ಟು ಅಂಕಿ ಅಂಶಗಳಿವೆ. ಆ ಅಂಕಿ ಅಂಶಗಳು ಎಷ್ಟು ಕಠೋರ ಮತ್ತು ಭೀಭತ್ಸಕರವೆಂದರೆ ನಮ್ಮ ಮಾಧ್ಯಮಗಳು ಇವುಗಳನ್ನು ಗಂಭೀರವಾಗಿ ಪರಿಗಣಿಸಿ ಜನರಿಗೆ ತಲುಪಿಸುವ ಶ್ರಮ ನಡೆಸಿದ್ದೇ ಆದಲ್ಲಿ, ಸಾರ್ವಜನಿಕವಾಗಿರುವ ಇತರೆಲ್ಲ ಚರ್ಚೆಗಳು ಬದಿಗೆ ಸರಿದು ಅಥವಾ ಮುಖ್ಯ ವಾಹಿನಿಯಿಂದ ಸರಿದುನಿಂತು ಮದ್ಯವೇ ಕೇಂದ್ರೀಯ ಚರ್ಚಾ ವಿಷಯವಾಗಿ ಬಿಡುವ ಸರ್ವ ಸಾಧ್ಯತೆಗಳೂ ಇವೆ. ಆದರೆ ಮಾಧ್ಯಮಗಳ ಸಾಮಾಜಿಕ ಬದ್ಧತೆಯು ದಿನದಿಂದ ದಿನಕ್ಕೆ ತೀರಾ ಸಂಕುಚಿತಗೊಳ್ಳುತ್ತಾ ಬರುತ್ತಿದೆ. ಮೌಲ್ಯನಿಷ್ಠೆ, ಸತ್ಯ ಮತ್ತು ಆರೋಗ್ಯಪೂರ್ಣ ಚಿಂತನೆ ಮುಂತಾದವುಗಳನ್ನೆಲ್ಲ ತಂತಮ್ಮ ಕಚೇರಿಗಳಿಂದ ಹೊರತಳ್ಳಿ ಕೇವಲ ಹಣ ನಿಷ್ಠೆಯನ್ನೇ ಪೂರ್ಣಕಾಲಿಕ ಮೌಲ್ಯವನ್ನಾಗಿ ಸ್ವೀಕರಿಸಿದಂತೆ ಅವು ವರ್ತಿಸುತ್ತಿವೆ. ಮದ್ಯದ ಜಾಹೀರಾತಿಲ್ಲದೇ ದೃಶ್ಯ ಮಾಧ್ಯಮ ಅಥವಾ ಮುದ್ರಣ ಮಾಧ್ಯಮವನ್ನು ನಡೆಸಿಕೊಂಡು ಬರಲು ಸಾಧ್ಯವೇ ಇಲ್ಲ ಅನ್ನುವ ಭ್ರಮೆಯೊಂದನ್ನು ಅದು ಸ್ವಯಂ ತಗುಲಿಸಿಕೊಂಡು ಓದುಗರು ಮತ್ತು ವೀಕ್ಷಕರನ್ನೂ ಆ ಭ್ರಮೆಯಲ್ಲಿ ತೇಲಿಬಿಡಲು ಯತ್ನಿಸುತ್ತಿವೆ. ಪತ್ರಿಕೆಗಳ ಒಂದು ಪುಟದಲ್ಲಿ ಮದ್ಯವಿರೋಧಿ ಸರಕಾರಿ ಜಾಹೀರಾತು ಮತ್ತು ಇನ್ನೊಂದು ಪುಟದಲ್ಲಿ ಮದ್ಯ ತಯಾರಕ ಕಂಪೆನಿಗಳ ಆಕರ್ಷಕ ಜಾಹೀರಾತು ಯಾವ ಮುಜುಗರವೂ ಇಲ್ಲದೇ ಪ್ರಕಟವಾಗುತ್ತಿರುವುದು ಇದೇ ಕಾರಣದಿಂದ. ಒಂದು ಪುಟದಲ್ಲಿ ಅಕ್ರಮ ಮದ್ಯದಂಗಡಿಗಳ ಮೇಲೆ ಅಬಕಾರಿ ಅಧಿಕಾರಿಗಳ ದಾಳಿಯ ಸುದ್ದಿಯಿದ್ದರೆ ಇನ್ನೊಂದು ಪುಟದಲ್ಲಿ ಸಕ್ರಮ ಮದ್ಯದ ಜಾಹೀರಾತು. ಒಂದು ಪುಟದಲ್ಲಿ ಕುಡಿದು ಪತ್ನಿಯನ್ನು ಕೊಲೆಗೈದ, ಅತ್ಯಾಚಾರ ನಡೆಸಿದ, ಹೆತ್ತವರ ಮೇಲೆ ಹಲ್ಲೆ ನಡೆಸಿದ, ಸಾರ್ವಜನಿಕರಿಗೆ ತೊಂದರೆ ಕೊಟ್ಟ- ಇಂಥ ಹತ್ತು-ಹಲವು ಸುದ್ದಿಗಳಿರುವಾಗ ಇನ್ನೊಂದು ಪುಟದಲ್ಲಿ ಪ್ರಸಿದ್ಧ ಮದ್ಯ ಕಂಪೆನಿಗಳ ಜಾಹೀರಾತು ಪ್ರಕಟಿಸುವುದನ್ನು ದ್ವಂದ್ವ, ಕಾಪಟ್ಯ ಎಂದು ಮಾಧ್ಯಮ ಸಂಸ್ಥೆಗಳು ತಿಳಿದುಕೊಳ್ಳದೇ ಇರುವುದು ಯಾತಕ್ಕೋ ಗೊತ್ತಾಗುತ್ತಿಲ್ಲ. ಮಾಧ್ಯಮ ಎಂದರೆ ದುಡ್ಡು ಮಾಡುವ ಉದ್ಯಮ ಎಂಬ ಹೆಸರಿಲ್ಲ. ಅದು ಪ್ರಜಾಪ್ರಭುತ್ವದ

ನಾಲ್ಕನೆ ಅಂಗ ಮತ್ತು ಕಾವಲು ನಾಯಿ ಎಂಬ ಜವಾಬ್ದಾರಿಯುತ ಬಿರುದನ್ನು ಹೊತ್ತುಕೊಂಡು ಜನರನ್ನು ಪ್ರತಿದಿನ ಭೇಟಿ ಮಾಡುತ್ತಿರುತ್ತದೆ. ಪ್ರತಿಕ್ಷಣ ಸುದ್ದಿಗಳನ್ನು ಕೊಡುತ್ತಿರುತ್ತದೆ. ಇಂಥ ಪ್ರಭಾವಶಾಲಿ ಕ್ಷೇತ್ರವೊಂದು ಮದ್ಯವಿರೋಧಿ ಚಳವಳಿಯೊಂದನ್ನು ವರ್ಷದ 365 ದಿನಗಳಲ್ಲೂ ಕೈಗೊಳ್ಳುವುದಕ್ಕೆ ಮತ್ತು ಸಂಪೂರ್ಣ ಮದ್ಯ ನಿಷೇಧ ಕಾನೂನು ಜಾರಿಗೊಳ್ಳುವವರೆಗೆ ಆ ಚಳವಳಿಯನ್ನು ಊರ್ಜಿತದಲ್ಲಿರಿಸುವುದಕ್ಕೆ ಖಂಡಿತ ಅವಕಾಶ ಇದೆ.- ಮಾತ್ರವಲ್ಲ, ಸಾಮಾಜಿಕ ಬದ್ಧತೆ ಎಂಬ ನಿಟ್ಟಿನಲ್ಲಿ ಇದು ಅದರ ಜವಾಬ್ದಾರಿ ಕೂಡಾ. ಜನರು ಇವತ್ತು ಮತ್ತು ಈ ಹಿಂದೆಯೂ ರಾಜಕಾರಣಿಗಳಿಗಿಂತ ಹೆಚ್ಚು ನಂಬಿಕೆಯಿಡುವುದು ಮಾಧ್ಯಮಗಳ ಮೇಲೆ. ಮಾಧ್ಯಮ ಸುದ್ದಿಯನ್ನು ಜನದನಿಯ ಪ್ರತಿಬಿಂಬ ಎಂದು ಜನರು ಇವತ್ತೂ ನಂಬುತ್ತಾರೆ. ಸ್ವಾತಂತ್ರ್ಯ ಪೂರ್ವದಿಂದ ಹಿಡಿದು ಇಂದಿನವರೆಗೆ ಹಲವಾರು ಅಪವಾದಗಳ ಹೊರತಾಗಿಯೂ ಮಾಧ್ಯಮರಂಗಕ್ಕೆ ಜನರ ನಡುವೆ ವಿಶೇಷ ಸ್ಥಾನವಿದೆ. ಹಲವಾರು ಸರಕಾರಗಳ ಬದಲಾವಣೆಗೆ, ಜನಪರ ಕಾನೂನಿನ ನಿರ್ಮಾಣಕ್ಕೆ, ಹಗರಣಗಳ ಪತ್ತೆ ಹಚ್ಚುವಿಕೆಗೆ... ಹೀಗೆ ಮಾಧ್ಯಮಗಳು ದೊಡ್ಡದೊಂದು ದೇಣಿಗೆಯನ್ನು ಅರ್ಪಿಸಿವೆ. ಬೋಫೋರ್ಸ್ ಹಗರಣ, ರಕ್ಷಣಾ ಹಗರಣ, 2ಜಿ ಹಗರಣ, ಕಾಮನ್‌ವೆಲ್ತ್ ಹಗರಣ... ಇವೆಲ್ಲ ಬಹಿರಂಗವಾದದ್ದು ಎಚ್ಚೆತ್ತ ಮಾಧ್ಯಮ ರಂಗದಿಂದ. ಒಂದು ರೀತಿಯಲ್ಲಿ, ಒಂದು ಸಮಾಜವನ್ನು ನೈತಿಕ, ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ ಸಬಲೀಕರಣಗೊಳಿಸುವುದು ಮತ್ತು ಮೌಲ್ಯ ಪ್ರೇಮಿಗೊಳಿಸುವುದರಲ್ಲಿ ಮಾಧ್ಯಮಗಳ ಪಾತ್ರ ಅತ್ಯಂತ ನಿರ್ಣಾಯಕವಾದುದು. ಅದು ಜನರ ನಾಡಿಮಿಡಿತವನ್ನು ನಿರ್ಧರಿಸುವಷ್ಟು ಪ್ರಭಾವಶಾಲಿ. ಅದರ ವಿಶ್ಲೇಷಣೆಯನ್ನು ಜನ ನಂಬುತ್ತಾರೆ. ಅದರ ಪ್ರಭಾವದಿಂದ ಸಂಘಟಿತರಾಗುತ್ತಾರೆ. ಪ್ರತಿಭಟನೆ ಹಮ್ಮಿಕೊಳ್ಳುತ್ತಾರೆ. ಮಾಧ್ಯಮಗಳು ಇಂಥ ಸಮಾಜಮುಖಿ ಕೆಲಸಗಳನ್ನು ಮಾಡಿಲ್ಲ ಎಂದಲ್ಲ, ಧಾರಾಳ ಮಾಡಿವೆ. ಆದರೆ ಅನೇಕ ಬಾರಿ ಮಾಧ್ಯಮಗಳು ತಮ್ಮ ಹೊಣೆಗಾರಿಕೆಯಿಂದ ಅಷ್ಟೇ ಜಾಣತನದಿಂದ ನುಣುಚಿಕೊಳ್ಳುತ್ತಿವೆ ಎಂಬುದೂ ಸತ್ಯ. ಸಂದರ್ಭಕ್ಕೆ ತಕ್ಕಂತೆ ಮದ್ಯಪಾನದಿಂದ ಆಗುವ ಅನಾಹುತಗಳ ಬಗ್ಗೆ ಒಂದು ಪುಟದ್ದೋ ಅರ್ಧ ಪುಟದ್ದೋ ಬರಹವನ್ನು ಪ್ರಕಟಿಸಿ ಅವು ಸುಮ್ಮನಾಗುತ್ತವೆ. ಹೆಚ್ಚಿನ ಸಂದರ್ಭಗಳಲ್ಲಿ ಮದ್ಯಪಾನದಿಂದ ಆದ ಅನಾಹುತಗಳ ಬಗ್ಗೆ ಸುದ್ದಿಯನ್ನು ಪ್ರಕಟಿಸುವಲ್ಲಿಗೆ ತನ್ನ ಹೊಣೆಗಾರಿಕೆಯನ್ನು ಅವು ಮುಕ್ತಾಯಗೊಳಿಸುತ್ತವೆ. ನಿಜವಾಗಿ ಮದ್ಯವು ಮಾಧ್ಯಮ ಸಂಸ್ಥೆಗಳನ್ನೂ ಇವತ್ತು ಆಪೋಶನ ತೆಗೆದುಕೊಂಡು ಬಿಟ್ಟಿದೆ. ರಾಜಕಾರಣಿಗಳ ಅಥವಾ ಪ್ರಭಾವಶಾಲಿ ಕಂಪೆನಿಗಳು ಮತ್ತು ಸಂಸ್ಥೆಗಳಿಗೆ ಸಂಬಂಧಿಸಿ ನಡೆಯುವ ಪತ್ರಿಕಾಗೋಷ್ಠಿಗಳ ಬಳಿಕ ಪತ್ರಕರ್ತರ ಮಧ್ಯೆ ಮದ್ಯಪಾರ್ಟಿ ನಡೆಯುವುದಿದೆ. ಖಾಸಗಿ ಪಾರ್ಟಿಗಳಾಗಿ ಮಾಧ್ಯಮ ಮಿತ್ರರು ಅದನ್ನು ಅನುಭವಿಸುವುದೂ ಇದೆ. ಮದ್ಯವು ಗಿಫ್ಟ್‌ಗಳಾಗಿ ಮನೆ ಸೇರುವುದೂ ಇದೆ. ನಿಜವಾಗಿ ಮದ್ಯವು ಮಾತಾಡಲೇ ಬೇಕಾದವರ ಬಾಯಿ ಮುಚ್ಚಿಸಿ ಹಾಕುವಷ್ಟು ಆಳವಾಗಿ ಜನಪ್ರಿಯವಾಗಿದೆ. ಯಾರು ಅದರ ವಿರುದ್ಧ ಬರೆಯಬಲ್ಲರೋ ಮಾತಾಡಬಲ್ಲರೋ ಕಾನೂನು ರೂಪಿಸಬಲ್ಲರೋ ದಾಳಿ ಮಾಡಬಲ್ಲರೋ ಅವರೆಲ್ಲರನ್ನೂ ಅದು ಆಪೋಶನ ಪಡಕೊಂಡು

ಬಿಟ್ಟಿದೆ. ಹೀಗಿರುವಾಗ ರಾಜಕಾರಣಿ ಅದರ ಎದುರು ಏನು ಮಾಡಬಲ್ಲ? ಪತ್ರಕರ್ತ ಅದರ ವಿರುದ್ಧ ಏನು ಬರೆಯಬಲ್ಲ? ನ್ಯಾಯವಾದಿ ಅದನ್ನು ಎದುರಿಸಿಕೊಂಡು ಹೇಗೆ ವಾದಿಸಬಲ್ಲ? ಶಿಕ್ಷಕ ಮದ್ಯವಿರೊಧಿ ಪಾಠವನ್ನು ಹೇಗೆ ಮಾಡಬಲ್ಲ? ಹಾಗಂತ ಇದಕ್ಕೆ ಅಪವಾದ ಇಲ್ಲ ಎಂದಲ್ಲ. ಖಂಡಿತ ಈ ಸಮಾಜದಲ್ಲಿ ಮದ್ಯವಿರೋಧಿ ಮನಸ್ಸುಗಳು ಮದ್ಯಪಾನಿ ಮನಸ್ಸುಗಳಿಗಿಂತ ಹೆಚ್ಚಿವೆ. ಮದ್ಯದ ಅನಾಹುತಕಾರಿ ಕೃತ್ಯಗಳಿಂದ ರೋಸಿಹೋಗಿರುವ ಈ ಗುಂಪು ಮದ್ಯವು ಸಂಪೂರ್ಣ ನಿಷೇಧವಾಗಲಿ ಎಂದು ಒತ್ತಾಯಿಸುತ್ತಲೂ ಇವೆ. ಆದರೆ ಮದ್ಯ ಲಾಬಿ ಎಷ್ಟು ಪ್ರಭಾವಶಾಲಿ ಎಂದರೆ ಈ ಮದ್ಯವಿರೋಧಿ ಮನಸ್ಸುಗಳನ್ನೆಲ್ಲ ಅದು ನವಿರಾಗಿ ಬದಿಗೆ ಸರಿಸುತ್ತದೆ. ಅವರ ಧ್ವನಿಯು ದುರ್ಬಲಗೊಳ್ಳುವಂತೆ ಮತ್ತು ಅಂಥ ವಿರೋಧಿ ಧ್ವನಿಗಳಿಗೆ ಎಲ್ಲೂ ಸ್ಪೇಸ್ ಸಿಗದಂತೆ ನೋಡಿಕೊಳ್ಳುತ್ತದೆ. ಮದ್ಯವಿಲ್ಲದಿದ್ದರೆ ಸರಕಾರ ನಡೆಸುವುದು ಹೇಗೆ ಎಂಬ ವಾದವನ್ನು ಮುಂದಿಟ್ಟು ಮದ್ಯವಿರೋಧಿ ಧ್ವನಿಗಳನ್ನು ಅಡಗಿಸುತ್ತದೆ. ಮದ್ಯ ಕುಡಿಯುವ ಮತ್ತು ಕುಡಿಯದಿರುವ ಆಯ್ಕೆಯು ಮುಕ್ತವಾಗಿರುವುದರಿಂದ ಮದ್ಯವನ್ನು ಬಲವಂತದಿಂದ ನಿಷೇಧಿಸುವುದೇಕೆ ಎಂದು ಅವು ಜಾಣತನದಿಂದ ಪ್ರಶ್ನಿಸುತ್ತಿವೆ. ಮದ್ಯವನ್ನು ಕಾನೂನಿನ ಮೂಲಕ ನಿಷೇಧಿಸುವುದು ಪ್ರಜಾತಂತ್ರವು ಒದಗಿಸಿರುವ ಆಯ್ಕೆಯ ಸ್ವಾತಂತ್ರ್ಯಕ್ಕೆ ವಿರುದ್ಧವಾದುದು ಎಂದು ಅದು ವಾದಿಸುತ್ತದೆ. ಬಹುಶಃ ಈ ವಾದ-ಪ್ರತಿವಾದಗಳ ಜಂಜಾಟದಲ್ಲಿ ಮದ್ಯ ನಿತ್ಯ ಕುಡುಕರ ಹೊಟ್ಟೆ ಸೇರುತ್ತಿದೆ. ಅವರನ್ನು ನಿಯಂತ್ರಣರಹಿತಗೊಳಿಸುತ್ತಿದೆ. ಹೆಜ್ಜೆ ತಪ್ಪುವ ಯುವಕ-ಯುವತಿಯರು, ಪತಿ-ಪತ್ನಿ, ತಂದೆ-ತಾಯಿಯಂದಿರು, ಮಕ್ಕಳು ಸುದ್ದಿಯನ್ನು ನಿತ್ಯ ಒದಗಿಸುತ್ತಿದ್ದಾರೆ.

## ಕೆಲವು ಅಂಕಿ ಅಂಶಗಳು

ಮದ್ಯವು ಜಗತ್ತಿನ ಮೂರನೇ ಅತಿದೊಡ್ಡ ಅನಾರೋಗ್ಯಕಾರಕ ವಸ್ತು ಎಂಬುದಾಗಿ ಅಧಿಕೃತ ಅಂಕಿಅಂಶಗಳು ವಿವರಿಸುತ್ತವೆ. ಜಾಗತಿಕವಾಗಿ ವರ್ಷಂಪ್ರತಿ 2.5 ಮಿಲಿಯನ್ ಮಂದಿ ಮದ್ಯಪಾನ ಸಂಬಂಧಿ ರೋಗಗಳಿಂದ ಸಾಯುತ್ತಿದ್ದಾರೆ. ಮದ್ಯವು 60ರಷ್ಟು ಪ್ರತ್ಯಕ್ಷ ರೋಗಗಳಿಗೆ ಮತ್ತು 200ರಷ್ಟು ಪರೋಕ್ಷ (ಉಪರೋಗ) ರೋಗಗಳಿಗೆ ಕಾರಣವಾಗುತ್ತದೆಂದು ವಿಶ್ವ ಆರೋಗ್ಯ ಸಂಸ್ಥೆ (WHO) ವಿವರಿಸುತ್ತದೆ. ಜಾಗತಿಕವಾಗಿ ಆಗುವ ಒಟ್ಟು ಸಾವುಗಳಲ್ಲಿ 4% ಸಾವು ಮದ್ಯಪಾನದ ಕಾರಣದಿಂದಾಗಿರುತ್ತದೆ. ಇದು ಯಾವುದೇ ಯುದ್ಧದಿಂದ, ಏಡ್ಸ್, ಕೋಮುಗಲಭೆಗಳಿಂದ ಆಗುವ ಸಾವುಗಳಿಗಿಂತಲೂ ಹೆಚ್ಚು. ಮುಂದುವರಿಯುತ್ತಿರುವ (ಅಭಿವೃದ್ಧಿಶೀಲ) ರಾಷ್ಟ್ರಗಳಲ್ಲಿ ಪುರುಷರ ಅಂಗವೈಕಲ್ಯಕ್ಕೆ ಮೊದಲ ನಾಲ್ಕು ಕಾರಣಗಳಲ್ಲಿ ಒಂದು ಮದ್ಯಪಾನಕ್ಕಿದೆ. 1990ರಲ್ಲಿ 'ದಿ ಗ್ಲೋಬಲ್ ಬರ್ಡನ್ ಆಫ್ ಡಿಸೀಸ್' ಎಂಬ ಹೆಸರಲ್ಲಿ ನಡೆಸಲಾದ ಸಮೀಕ್ಷೆಯ ಪ್ರಕಾರ ಪ್ರತಿವರ್ಷ ವಿಶ್ವಾದ್ಯಂತ ಮದ್ಯದ ಕಾರಣದಿಂದಾಗಿ ಶಾಶ್ವತ ಅಂಗವೈಕಲ್ಯಕ್ಕೆ ತುತ್ತಾಗುತ್ತಿರುವವರ ಸಂಖ್ಯೆ 3.5% (ಮುರ್ರೆ ಮತ್ತು ಲೊಪೆಝ್-1996). ಮುಂದುವರಿದ ರಾಷ್ಟ್ರಗಳಲ್ಲಿ ಮದ್ಯಪಾನದಿಂದಾಗಿ ಪ್ರತಿವರ್ಷ ಸರಾಸರಿ 1 ಲಕ್ಷದ 36

ಸಾವಿರಕ್ಕಿಂತಲೂ ಅಧಿಕ ಮಂದಿ ಸಾಯುತ್ತಿದ್ದಾರೆ. ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲಿ ಇದರ ಏಳೆಂಟು ಪಟ್ಟು ಅಧಿಕ ಮಂದಿ ಸಾಯುತ್ತಿದ್ದಾರೆ (ವಿಶ್ವ ಆರೋಗ್ಯ ಸಂಸ್ಥೆ-WHO-1999). ಮೆಕ್ಸಿಕೋದಲ್ಲಿ ಜನರ ಸಾವಿಗಿರುವ ಪ್ರಮುಖ 10 ಕಾರಣಗಳಲ್ಲಿ Cirrhosis ಕೂಡ ಒಂದು. 35 ರಿಂದ 45 ವರ್ಷಗಳ ನಡುವಿನವರಲ್ಲಿ ಈ ರೋಗವು ಎಷ್ಟು ಪ್ರಮಾಣದಲ್ಲಿ ವ್ಯಾಪಿಸಿದೆಯೆಂದರೆ ಅಲ್ಲಿ ಇದು ನಂ. ವನ್ ಕೊಲೆಗಾರನಾಗಿ (Madrigal -1988, Madina -Mora 1999) ಗುರುತಿಸಿಕೊಂಡಿದೆ. ಮದ್ಯಪಾನವು ಅತ್ಯಂತ ಸಹಜವಾಗಿರುವ ಮತ್ತು ಬದುಕಿನ ಭಾಗದಂತೆ ಅದರೊಂದಿಗೆ ಹೊಂದಿಕೊಂಡಿರುವ ಅರ್ಜಂಟೀನ, ಮೆಕ್ಸಿಕೊ, ವೆನೆಝುವೇಲಾ ಮತ್ತು ಟ್ರೆನಿಡಾಡ್-ಟೊಬೆಗೋಗಳಲ್ಲಿ Cirrhosis ನಿಂದ ಸಾವಿಗೀಡಾಗುವ ಮಹಿಳೆಯರಿಗಿಂತ 3 ಪಟ್ಟು ಅಧಿಕ ಪುರುಷರಿದ್ದಾರೆ. ಆಸ್ಟ್ರೇಲಿಯಾದಲ್ಲಿ 41% ಮಂದಿಯ ಆತ್ಮಹತ್ಯೆಗೆ ಮದ್ಯ ಕಾರಣವಾಗಿದ್ದರೆ 16% ಮಹಿಳೆಯರ ಆತ್ಮಹತ್ಯೆಗೆ ಅದು ಕಾರಣವಾಗಿದೆ. ಮೆಕ್ಸಿಕೋದಲ್ಲಿ ಶೇ. 26 ಕ್ಕಿಂತ ಹೆಚ್ಚು ಮಹಿಳೆಯರು ನಿಯಮಿತವಾಗಿ ಕೌನ್ಸಿಲಿಂಗ್‌ನ ಮೊರೆ ಹೊಗುತ್ತಿದ್ದಾರೆ. ಯಾಕೆಂದರೆ ಅವರ ಪತಿಯಂದಿರು ಕುಡಿತದ ಚಟಕ್ಕೆ ಬಿದ್ದಿದ್ದು ಅದು ದಾಂಪತ್ಯ ಮತ್ತು ಕೌಟುಂಬಿಕ ಜೀವನದ ಮೇಲೆ ಅಗಾಧ ಪರಿಣಾಮವನ್ನು ಬೀರುತ್ತಿದೆ. ಅವರು ತಮ್ಮ ಪತಿಯಂದಿರಿಂದ ಲೈಂಗಿಕ ದೌರ್ಜನ್ಯ, ಹಲ್ಲೆಗಳಿಗೆ ಗುರಿಯಾಗುತ್ತಿದ್ದಾರೆ. ಮದ್ಯವು ಮೆಕ್ಸಿಕೋದ ಕೌಟುಂಬಿಕ ವ್ಯವಸ್ಥೆಯ ಬಲುದೊಡ್ಡ ವೈರಿಯಾಗಿ ಗುರುತಿಸಿಕೊಂಡಿದೆ ಎಂಬುದು ಸಮೀಕ್ಷೆಯಿಂದ (Ramirez and others -1992) ವ್ಯಕ್ತವಾಗಿದೆ. ಸೊಲೋಮನ್ ದ್ವೀಪದಲ್ಲಿ ಶೇ.32 ಕೌಟುಂಬಿಕ ಕಲಹಗಳು ಮದ್ಯ ಸಂಬಂಧಿಯಾಗಿವೆ ಎಂದು 1995ರಲ್ಲಿ ಮೆಕ್‌ಡೊನಾಲ್ಡ್ ಎಂಬ ಸಮೀಕ್ಷಾ ವರದಿಯು ಸ್ಪಷ್ಟ ಪಡಿಸಿದೆ. ದಕ್ಷಿಣ ಆಫ್ರಿಕಾದಲ್ಲಂತೂ ಗೃಹಹಿಂಸೆ, ಲೈಂಗಿಕ ದೌರ್ಜನ್ಯ, ಕೌಟುಂಬಿಕ ಕಲಹಗಳ ಪ್ರಕರಣವು ಸೊಲೋಮನ್ ದ್ವೀಪಗಳಿಗಿಂತಲೂ ಅಧಿಕ ಪ್ರಮಾಣದಲ್ಲಿದೆ. ಆಫ್ರಿಕಾದ ರಾಜಧಾನಿ ಕೇಪ್‌ಟೌನ್‌ನಲ್ಲಿ ಶೇ. 67.4 ರಷ್ಟು ಗೃಹಹಿಂಸೆಗೆ (Domestic Violence) ಮದ್ಯಪಾನ ಕಾರಣವಾಗಿದ್ದರೆ ಗ್ರಾಮೀಣ ಪ್ರದೇಶಗಳಲ್ಲಿ ಶೇ.76.4 ರಷ್ಟು ಗೃಹಹಿಂಸೆಗೆ ಮದ್ಯವು ಕಾರಣವಾಗಿದೆ (Parry- 1995). ಕೆನಡದಲ್ಲಿ ಮಕ್ಕಳ ಮೇಲಿನ ಲೈಂಗಿಕ ದೌರ್ಜನ್ಯ, ಪೀಡನೆಗಳಲ್ಲಿ ಶೇ.16 ಪ್ರಕರಣಗಳಿಗೆ ಮದ್ಯವು ಕಾರಣವಾಗಿದೆ. ಜಪಾನ್‌ನಲ್ಲಿ ಕುಡುಕ ಹೆತ್ತವರಿಂದಾಗಿ ಶೇ. 20 ರಷ್ಟು ಮಕ್ಕಳು ದೌರ್ಜನ್ಯಕ್ಕೆ ಒಳಗಾಗುತ್ತಿದ್ದರೆ ಹಂಗೇರಿಯಲ್ಲಿ ಶೇ.8.6 ರಷ್ಟು ಮಕ್ಕಳು ಕುಡುಕ ಹೆತ್ತವರಿಂದ ತೊಂದರೆಗೊಳಗಾಗುತ್ತಿದ್ದಾರೆ (Fokete-1996). ಮದ್ಯವು ಇಂಗ್ಲೆಂಡಿನಲ್ಲಿ ಶೇ. 30 ರಷ್ಟು ಹಾಗೂ ನಾರ್ವೆಯಲ್ಲಿ ಶೇ. 50 ರಷ್ಟು ಮಕ್ಕಳ ಮೇಲಿನ ದೌರ್ಜನ್ಯಕ್ಕೆ ಕಾರಣವಾಗಿದೆ (Moser -1992). ಮದ್ಯಪಾನ ಸಂಬಂಧಿ ಜಗಳ ಮತ್ತು ಹಿಂಸೆಯಿಂದಾಗಿ 1983ರಲ್ಲಿ ಅಮೇರಿಕದ ಆರ್ಥಿಕತೆಗೆ 117 ಬಿಲಿಯನ್ ಡಾಲರ್ ಹೊರೆ ಬಿತ್ತು ಎಂದು ಅಮೇರಿಕದ ಆರೋಗ್ಯ ಇಲಾಖೆ (US Department of Health and Human Services -1990) ಸ್ಪಷ್ಟಪಡಿಸಿದೆ. ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾದ ಪ್ರಕಾರ ಹೆಚ್ಚಿನೆಲ್ಲ ಲೈಂಗಿಕ ಹಲ್ಲೆಗಳಿಗೆ ಮದ್ಯಪಾನವು ಪ್ರಮುಖ ಕಾರಣವಾಗಿದೆ. National Crime

Victimization Survey Bureau of Justiceನ -(US Department of Justice) ಪ್ರಕಾರ ಅಮೇರಿಕದಲ್ಲಿ 1996ರಲ್ಲಿ ನಡೆದ 2713 ಅತ್ಯಾಚಾರ ಪ್ರಕರಣಗಳಿಗೆ ಮದ್ಯಪಾನವೇ ಕಾರಣವಾಗಿತ್ತು. ಅಮೇರಿಕದಂಥ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಮಂದಿ ಕೂಡ ಮದ್ಯ ಸೇವಿಸಿದ ಬಳಿಕ ಅಭಿವೃದ್ಧಿ ಹೊಂದದ ಮತ್ತು ತೀರಾ ಬಡತನದಲ್ಲಿರುವ ರಾಷ್ಟ್ರಗಳ ಜನರಂತೆ ಅತ್ಯಾಚಾರ, ಚುಡಾವಣೆ ಮತ್ತು ಹಾದರಕ್ಕೆ ಮುಂದಾಗುತ್ತಾರೆ ಎಂಬ ವಿವರವನ್ನು ಈ ವರದಿಯು ದೃಢ ಪಡಿಸುತ್ತದೆ. ಅಮೇರಿಕದಲ್ಲಿ ಪ್ರತಿ 12ರಲ್ಲಿ ಓರ್ವರು ಹಾದರದಲ್ಲಿ ಪಾಲುಗೊಳ್ಳುತ್ತಾರೆ ಮತ್ತು ಅಂಥ ಧೈರ್ಯಕ್ಕೆ ಮದ್ಯವು ಅವರನ್ನು ಪ್ರಚೋದಿಸುತ್ತದೆ ಎಂದು ವರದಿಯು ಹೇಳುತ್ತದೆ. ಅಂದರೆ ಮದ್ಯಪಾನಿಯು ಶಿಕ್ಷಿತನಾದರೂ ಅಲ್ಲದಿದ್ದರೂ ಅದು ಅವರಿಬ್ಬರನ್ನೂ ಒಂದೇ ರೀತಿಯಲ್ಲಿ ಆಲೋಚಿಸುವಂತೆ ಮತ್ತು ಅನಾಗರಿಕ ಕೃತ್ಯಗಳಲ್ಲಿ ಪಾಲುಗೊಳ್ಳುವಂತೆ ಪ್ರಚೋದಿಸುತ್ತದೆ. ಅಮೇರಿಕದಲ್ಲಿ ಪ್ರತಿವರ್ಷ 80 ಸಾವಿರ ಮಂದಿ ಮದ್ಯಪಾನ ಸಂಬಂಧಿ ರೋಗಗಳಿಂದ ಸಾವಿಗೀಡಾಗುತ್ತಾರೆ. ಮದ್ಯಪಾನದ ಲೈಫ್ ಸ್ಟೈಲ್ ಇರುವ ಅಮೇರಿಕದಲ್ಲಿ ಸಾವಿನ ಮೂರು ಪ್ರಮುಖ ಕಾರಣಗಳಲ್ಲಿ ಮದ್ಯವೂ ಒಂದು. ಲ್ಯಾನ್ಸೆಟ್ (Lanscet) ಎಂಬ ಅಮೆರಿಕನ್ ಪತ್ರಿಕೆಯು Alcohol and Global Health ಎಂಬ ಸರ್ವೇ ಆಧಾರಿತ ಸರಣಿ ಲೇಖನಗಳನ್ನು 2004ರಲ್ಲಿ ಪ್ರಕಟಿಸಿತ್ತು. ಇದರ ಪ್ರಕಾರ ಮದ್ಯ ಸಂಬಂಧಿ ಅಪಘಾತ, ಹಿಂಸೆ, ಗಂಟಲು ಮತ್ತು ಬಾಯಿ ಕ್ಯಾನ್ಸರ್, ಆತ್ಮಹತ್ಯೆ, ಹೃದಯಾಘಾತ ಮುಂತಾದವುಗಳ ಪ್ರಮಾಣದಲ್ಲಿ ವರ್ಷಂಪ್ರತಿ 0.6% ಹೆಚ್ಚಳವಾಗುತ್ತಿದೆ ಎಂದಿತು. ಜಾಗತಿಕವಾಗಿ ಆಗುವ ಪ್ರತಿ 25 ಸಾವುಗಳಲ್ಲಿ ಒಂದು ಸಾವಿಗೆ ಮದ್ಯ ಕಾರಣವಾಗಿರುತ್ತದೆ ಎಂದೂ ಅದು ಹೇಳಿದೆ. ಅಷ್ಟಕ್ಕೂ ಅಮೇರಿಕ ಮತ್ತಿತರ ಮುಂದುವರಿದ ರಾಷ್ಟ್ರಗಳ ಅಂಕಿ-ಅಂಶಗಳನ್ನೇ ಇಲ್ಲಿ ಯಾಕೆ ಪಟ್ಟಿ ಮಾಡಲಾಗಿದೆಯೆಂದರೆ ಅವುಗಳ ಜೀವನ ಕ್ರಮವನ್ನು ಜಗತ್ತಿನ ಇತರ ರಾಷ್ಟ್ರಗಳ ಮಂದಿ ಅನುಕರಿಸಲು ಬಯಸುತ್ತಾರೆ. ಯುರೋಪಿಯನ್ ಯೂನಿಯನ್ನಿನ ರಾಷ್ಟ್ರಗಳು ಮದ್ಯಪಾನವನ್ನು ಅತೀ ಹೆಚ್ಚು ಬಳಕೆ ಮಾಡುವ ರಾಷ್ಟ್ರಗಳಾಗಿ ಇವತ್ತು ಗುರುತಿಸಿಕೊಂಡಿವೆ. ಈ ರಾಷ್ಟ್ರಗಳಲ್ಲಿ ಯಾವುದು ಇವತ್ತು ಬಳಕೆಗೆ ಬರುತ್ತದೋ ನಾಳೆ ಅದು ಜಗತ್ತಿನ ಇತರ ರಾಷ್ಟ್ರಗಳಲ್ಲೂ ಬಳಕೆಗೆ ಬರುತ್ತದೆ. ಅದನ್ನು ಅನುಸರಿಸುವುದು ಗೌರವಾರ್ಹ ಮತ್ತು ಫ್ಯಾಶನ್ ಎಂದು ತಿಳಿದುಕೊಳ್ಳುವ ಪೀಳಿಗೆಗಳು ಬೆಳೆದು ಬರುತ್ತಾ ಇದೆ.

ನಿಜವಾಗಿ, ಅಮೇರಿಕ ಮತ್ತು ಇನ್ನಿತರ ಮುಂದುವರಿದ ರಾಷ್ಟ್ರಗಳಲ್ಲಿ ಮದ್ಯದ ಹಾವಳಿಯು ಆಯಾ ದೇಶಗಳ ಆರ್ಥಿಕತೆಗೆ ಮತ್ತು ಆರೋಗ್ಯ ಕ್ಷೇತ್ರಕ್ಕೆ ಯಾವ ಬಗೆಯ ಸವಾಲನ್ನು ಒಡ್ಡಿದೆ ಎಂಬುದು ತಿಳಿದಿಲ್ಲದ ವಿಷಯವಾಗಿರಲಿಲ್ಲ. ದೇಶವು ಕುಡುಕರ ರಾಷ್ಟ್ರವಾದರೆ ಪೀಳಿಗೆಯ ಗತಿಯೇನು ಎಂಬೊಂದು ಪ್ರಶ್ನೆ ಅಮೇರಿಕವನ್ನೂ ಕಾಡಿತ್ತು. ಆದ್ದರಿಂದ ಅಮೇರಿಕನ್ ಅಧ್ಯಕ್ಷ ಫ್ರಾಂಕ್ಲಿನ್ ರೂಸ್‌ವೆಲ್ಟ್‌ರ ಕಾಲದಲ್ಲಿ ಅಮೇರಿಕವು ಮದ್ಯಕ್ಕೆ ನಿಷೇಧ ವಿಧಿಸುವ ಕ್ರಮಕ್ಕೆ ಮುಂದಾಯಿತು. The Noble Experiment- ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿರುವ ಆ ಪ್ರಯತ್ನವು ಎಷ್ಟು ಬೇಗ ಜಾರಿಗೊಂಡಿತ್ತೋ ಅಷ್ಟೇ ಬೇಗ ವಿಫಲವಾಯಿತು. ಅಮೇರಿಕದ

ನಿಷೇಧ ಭೀತಿಯಿಂದಾಗಿ ಮದ್ಯ ತಯಾರಕ ಕಂಪೆನಿಗಳು ಬಾಗಿಲು ಮುಚ್ಚಿದವು. ಆದರೆ ಜನರಿಗೆ ಮದ್ಯ ಇಲ್ಲದ ದಿನಗಳನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಅವರು ಒಳದಾರಿಯನ್ನು ಕಂಡುಕೊಂಡರು. ಮದ್ಯವನ್ನು ಅಕ್ರಮವಾಗಿ ತಯಾರಿಸುವ ಮತ್ತು ಕಾನೂನುಬಾಹಿರವಾಗಿ ಮಾರಾಟ ಮಾಡುವ ದಂಧೆಗೆ ಇಳಿದರು. ಒಂದು ಕಡೆ ಮದ್ಯ ನಿಷೇಧದಿಂದ ಅಬಕಾರಿ ವರಮಾನದಲ್ಲಿ ಕಡಿತ, ಇನ್ನೊಂದು ಕಡೆ ಮದ್ಯಕ್ಕೆ ನಿಷೇಧ ಬಿದ್ದಿದ್ದರೂ ಅಕ್ರಮ ಮದ್ಯ ಮಾರಾಟ ಜಾಲ. ರೂಸ್‌ವೆಲ್ಟ್‌ರು ಈ ಕುರಿತಂತೆ ಮರು ಪರಿಶೀಲನೆ ಮಾಡಲೇಬೇಕಾದ ಅನಿವಾರ್ಯತೆಗೆ ತುತ್ತಾದರು. ಕೊನೆಗೆ ಮದ್ಯ ಉತ್ಪಾದನೆ ಮತ್ತು ಮಾರಾಟಕ್ಕೆ ಅನುಮತಿ ನೀಡುವ Cullen - Harrison Act-ಗೆ ಸಹಿ ಹಾಕಿದರು. ಅಮೇರಿಕ ಅಲ್ಲದೆ 1907-1948ರ ಮಧ್ಯೆ ಪ್ರಿನ್ಸ್ ಎಡ್ವರ್ಡ್ ಐಲ್ಯಾಂಡ್‌ನಲ್ಲಿ, ಕೆನಡ ಮತ್ತು ಇತರ ರಾಷ್ಟ್ರಗಳಲ್ಲಿ ಮದ್ಯಕ್ಕೆ ನಿಷೇಧ ವಿಧಿಸಲಾಗಿತ್ತು. 1907-1992ರ ವರೆಗೆ ಪರೋರೆ ಐಲ್ಯಾಂಡ್‌ಗಳಲ್ಲಿ, 1914-25ರ ವರೆಗೆ ರಷ್ಯಾ ಮತ್ತು ಸೋವಿಯತ್ ರಾಷ್ಟ್ರಗಳಲ್ಲಿ, 1919ರಲ್ಲಿ ಹಂಗೇರಿಯಲ್ಲಿ, 1920-1933ರ ವರೆಗೆ ಫಿನ್‌ಲ್ಯಾಂಡ್ ನಲ್ಲಿ ಮದ್ಯಕ್ಕೆ ನಿಷೇಧ ವಿಧಿಸಲಾಗಿತ್ತು. ಆದರೆ ನಿಷೇಧದ ಬಳಿಕ ಈ ಎಲ್ಲ ರಾಷ್ಟ್ರಗಳು ಆದಾಯದ ಕೊರತೆಯನ್ನು ಎದುರಿಸಿದುವಲ್ಲದೆ ಪರ್ಯಾಯ ಆದಾಯ ಮೂಲವನ್ನು ಕಂಡುಕೊಳ್ಳುವಲ್ಲಿ ವಿಫಲವಾದುವು. ಅಲ್ಲದೆ ಜನರ ಒತ್ತಡ, ಮದ್ಯ ಕಂಪೆನಿಗಳ ಪಿತೂರಿ, ಲಾಬಿ, ಕೃತಕ ಹಾಹಾಕಾರ ಸೃಷ್ಟಿಯ ಕಾರಣಗಳಿಂದಾಗಿ ಈ ಎಲ್ಲ ರಾಷ್ಟ್ರಗಳ ಆಡಳಿತ ವರ್ಗಗಳು ಒಂದು ಬಗೆಯ ಭೀತಿಗೆ ಒಳಗಾದುವು. ಜನರು ಅಧಿಕಾರದಿಂದ ಕೆಳಗಿಳಿಸುವರೇನೋ ಎಂಬ ಅನುಮಾನದೊಂದಿಗೆ ನಿಷೇಧವನ್ನು ಹಿಂತೆಗೆದುಕೊಳ್ಳಲಾಯಿತು. ಬಹುಶಃ ಮದ್ಯ ನಿಷೇಧವು ಈ ಮಟ್ಟದಲ್ಲಿ ದಯನೀಯ ವೈಫಲ್ಯ ಅನುಭವಿಸುವುದಕ್ಕೆ ಮದ್ಯ ಉತ್ಪಾದಕ ಬೃಹತ್ ಕಂಪೆನಿಗಳ ಕೈವಾಡವೇ ಕಾರಣ ಎಂದು ಹೇಳಲಾಗುತ್ತದೆ. ಮದ್ಯಕ್ಕೆ ನಿಷೇಧ ಬಿದ್ದ ಕೂಡಲೇ ಅವು ಅಕ್ರಮ ಮದ್ಯ ತಯಾರಿಕೆಗೆ ಪ್ರೋತ್ಸಾಹ ಕೊಟ್ಟವು. ಸ್ಥಳೀಯವಾಗಿ ಮದ್ಯ ತಯಾರಿಕೆ ಮತ್ತು ಮಾರಾಟಗಳ ಜಾಲ ಹುಟ್ಟಿಕೊಳ್ಳುವಂತೆ ಅವು ನೋಡಿಕೊಂಡು ಬೆಂಬಲ ನೀಡಿದವು. ಅಕ್ರಮ ಮದ್ಯದಿಂದ ಸಾವೋ ಅನಾಹುತವೋ ಉಂಟಾಗುವುದೂ ಇಂಥ ಕಂಪೆನಿಗಳ ಇರಾದೆಯಾಗಿತ್ತು. ಹೀಗಾದರೆ ಸರಕಾರದ ಮೇಲೆ ಒತ್ತಡ ಹೇರುವುದಕ್ಕೆ ಸುಲಭವಾಗುತ್ತದೆ. ಸರಕಾರಕ್ಕೆ ವರಮಾನವೂ ಇಲ್ಲ, ಮದ್ಯಕ್ಕೂ ತಡೆಯೂ ಇಲ್ಲ ಎಂಬೊಂದು ಪರಿಸ್ಥಿತಿ ನಿರ್ಮಾಣವಾಗುವುದು ಯಾವುದೇ ಸರಕಾರವನ್ನೂ ಇಕ್ಕಟ್ಟಿನಲ್ಲಿ ಸಿಲುಕಿಸುತ್ತದೆ. ಅಪಾರ ವರಮಾನವನ್ನು ತರುವ ಮದ್ಯದ ಮೇಲೆ ನಿಷೇಧ ವಿಧಿಸುವುದೆಂದರೆ, ಅದಕ್ಕೆ ಅಪಾರ ಧೈರ್ಯಬೇಕು. ಜನರ ಆರೋಗ್ಯದ ಹೊರತಾದ ಇನ್ನಾವ ಕಾರಣಗಳೂ ಅದಕ್ಕೆ ಹೇತುವೂ ಆಗಿರುವುದಿಲ್ಲ. ಆದರೆ ಇಂಥ ಸಾಹಸಕ್ಕೆ ಕೈ ಹಾಕಿಯೂ ಜನರು ಅದನ್ನು ವಿಫಲಗೊಳಿಸುತ್ತಾರೆಂದರೆ ಅಥವಾ ಅದು ಪರಿಣಾಮ ಬೀರುತ್ತಿಲ್ಲವೆಂದರೆ, ಆ ಬಗ್ಗೆ ಸರಕಾರವೊಂದು ಮರು ಪರಿಶೀಲಿಸಬೇಕಾಗುತ್ತದೆ. ಸರಕಾರ ನೀಡಬಹುದಾದ ಕಾರಣ ಇದಾದರೆ, ಈ ಕಾರಣಗಳಲ್ಲೇ ಸಂಚೂ ಇರುವುದಕ್ಕೆ ಅವಕಾಶ ಇರುತ್ತದೆ. ಜನರನ್ನು ತೃಪ್ತಿ ಪಡಿಸುವುದಕ್ಕೆ ನಿಷೇಧ ವಿಧಿಸಿದಂತೆ ನಟಿಸಿ, ಒಳಗಿಂದೊಳಗೆಯೇ ಈ ನಿಷೇಧವು

ವಿಫಲವಾಗುವಂತೆ ನೋಡಿಕೊಳ್ಳುವ ಸಾಧ್ಯತೆಯೂ ಇರುತ್ತದೆ. ಕಳ್ಳ ಭಟ್ಟಿಗೂ ಅಕ್ರಮ ಮದ್ಯ ತಯಾರಿಕೆಗೂ ಪ್ರೋತ್ಸಾಹ ಕೊಟ್ಟು ಕೊನೆಗೆ ಅದರ ನೆಪದಲ್ಲೇ ನಿಷೇಧವನ್ನು ಹಿಂತೆಗೆದುಕೊಳ್ಳುವ ನಾಟಕವಾಡುವುದಕ್ಕೂ ಅವಕಾಶ ಇದೆ.

## ಭಾರತದಲ್ಲಿ ಮದ್ಯ ನಿಷೇಧ ಮತ್ತು ಹಿಂತೆಗೆತ!

ಸ್ವತಂತ್ರಗೊಂಡಂದಿನಿಂದಲೂ ಭಾರತದಲ್ಲಿ ಮದ್ಯಪಾನ ಮತ್ತು ಕಾನೂನುಗಳ ಮಧ್ಯೆ ಕಣ್ಣಾಮುಚ್ಚಾಲೆಯಾಟ ನಡೆಯುತ್ತಲೇ ಬಂದಿದೆ. ಸ್ವತಂತ್ರ ಭಾರತದ ಆರಂಭ ಕಾಲದಲ್ಲಿ ಗುಜರಾತ್, ಆಂಧ್ರಪ್ರದೇಶ, ತಮಿಳುನಾಡು ಮತ್ತು ನಾಲ್ಕೈದು ದಶಕಗಳ ಬಳಿಕ ಮಿಝೋರಾಮ್, ಹರ್ಯಾಣ, ಲಕ್ಷದ್ವೀಪ, ಮಣಿಪುರ, ನಾಗಾಲ್ಯಾಂಡ್‌ಗಳೆಲ್ಲ ಮದ್ಯದ ವಿರುದ್ಧ ನಿಷೇಧ ವಿಧಿಸಿದ್ದವು. ಆದರೆ ಸ್ವಾತಂತ್ರ್ಯದ ಈ ಆರು ದಶಕಗಳ ಬಳಿಕ(2014) ಮದ್ಯ ನಿಷೇಧ ನೀತಿಯಲ್ಲಿ ರಾಜಿ ಮಾಡಿಕೊಳ್ಳದೇ ಉಳಿದಿರುವ ರಾಜ್ಯಗಳು ಗುಜರಾತ್, ನಾಗಾಲ್ಯಾಂಡ್, ಮಣಿಪುರ, ಲಕ್ಷದ್ವೀಪಗಳು ಮಾತ್ರ. ಅದರಲ್ಲೂ ಸಂಪೂರ್ಣ ಮದ್ಯನಿಷೇಧವು ಅತ್ಯಂತ ಯಶಸ್ವಿಯಾಗಿ ಜಾರಿಯಲ್ಲಿರುವುದು ಲಕ್ಷದ್ವೀಪದಲ್ಲಿ ಮಾತ್ರ. ಮಣಿಪುರದಲ್ಲಿ ಸಂಪೂರ್ಣ ಮದ್ಯ ನಿಷೇಧವನ್ನು ಜಾರಿಗೊಳಿಸುವಂತೆ ಒತ್ತಾಯಿಸಿ 80–90ರ ದಶಕದಲ್ಲಿ ಮಣಿಪುರ ಮಹಿಳಾ ಗುಂಪು ಮತ್ತು ಭೂಗತ ಸಶಸ್ತ್ರ ಗುಂಪು ತೀವ್ರ ಪ್ರತಿಭಟನೆ ನಡೆಸಿದ್ದುವು. ಅದರಂತೆ 1991 ಎಪ್ರಿಲ್ 1 ರಂದು ಮುಖ್ಯಮಂತ್ರಿ ರಣಬೀರ್ ಸಿಂಗ್‌ರ ನೇತೃತ್ವದ ಸರಕಾರವು ರಾಜಧಾನಿ ಇಂಫಾಲ್‌ನ ದಕ್ಷಿಣ ಮತ್ತು ಉತ್ತರ ಭಾಗ ಹಾಗೂ ತೌಬಾಲ್ ಮತ್ತು ಬಿಷನ್‌ಪುರ್ ಜಿಲ್ಲೆಗಳಲ್ಲಿ ಸಂಪೂರ್ಣ ಮದ್ಯ ನಿಷೇಧವನ್ನು ಜಾರಿ ಮಾಡಿತು. ಆದರೆ ಹಿಂದುಳಿದ ವರ್ಗ ಮತ್ತು ಜಾತಿಗಳಿರುವ (SC-ST) ಪ್ರದೇಶಗಳಲ್ಲಿ ಅವರ ಸಂಸ್ಕೃತಿಯ ಕಾರಣವನ್ನು ಮುಂದಿಟ್ಟು ಸ್ಥಳೀಯ ಮದ್ಯ ತಯಾರಿಕೆ ಮತ್ತು ಬಳಕೆಗೆ ಅವಕಾಶ ನೀಡಿತು. ಆದರೆ ಸರಕಾರದ ಈ ಸಡಿಲಿಕೆ ನೀತಿಯು ಕಾನೂನು ಉಲ್ಲಂಘನೆಗೆ ದಾರಿ ಮಾಡಿಕೊಟ್ಟಿತು. ಮದ್ಯವು ವ್ಯಾಪಕ ಪ್ರಮಾಣದಲ್ಲಿ ಅಕ್ರಮವಾಗಿ ಮಾರಾಟಕ್ಕೆ ಒಳಗಾಯಿತು. ಕೊನೆಗೆ 2002ರಲ್ಲಿ ಮುಖ್ಯಮಂತ್ರಿ ಜಕ್ರಾಮ್ ಇಬೋಬಿ ಸಿಂಗ್‌ರು ಮಣಿಪುರದ (ಈ ಹಿಂದೆ ವಿಧಿಸಲಾಗಿದ್ದ) ಕಣಿವೆ ಪ್ರದೇಶದ 5 ಜಿಲ್ಲೆಗಳಲ್ಲಿ ಮದ್ಯ ನಿಷೇಧವನ್ನು ಹಿಂತೆಗೆದುಕೊಂಡರು.

ನಾಗಾಲ್ಯಾಂಡ್‌ನಲ್ಲಿ ನಾಗಾ ಮದರ್ಸ್ ಅಸೋಸಿಯೇಶನ್ ಎಂಬ ಪ್ರಭಾವಿ ಗುಂಪಿನ ಒತ್ತಡದಿಂದಾಗಿ Nagaland Liquor Total Prohibition Act- 1989ರಲ್ಲಿ ಜಾರಿಗೊಂಡಿತು. ಮದ್ಯ ಮಾರಾಟ ಮತ್ತು ಬಳಕೆಯನ್ನು ಸರಕಾರವು ನಿಷೇಧಿಸಿತು. ಆದರೆ ಈ ನಿಷೇಧದಲ್ಲಿ ಅಂಥ ಬಲವೇನೂ ಇರಲಿಲ್ಲ. ಆದ್ದರಿಂದಲೇ ಸ್ಥಳೀಯವಾಗಿ ತಯಾರಿಸಲಾಗುವ ಝು ಮತ್ತು ರೋಹಿ ಎಂಬ ಹೆಸರಿನ ಮದ್ಯವು ಅಲ್ಲಿ ಸುಲಭವಾಗಿ ಲಭ್ಯವಾಗುತ್ತಿದೆ ಹಾಗೂ ಭಾರತದ ಇತರ ಭಾಗಗಳಲ್ಲಿ ತಯಾರಾಗುವ ಮದ್ಯ ಪ್ರಕಾರಗಳೂ ಅಲ್ಲಿ ಸಿಗುತ್ತಿವೆ ಎಂದು ಅಧಿಕೃತ ವರದಿಗಳೇ ಹೇಳುತ್ತಿವೆ. ಮದ್ಯ ನಿಷೇಧವು ರಾಜ್ಯದಲ್ಲಿ ವಿಫಲಗೊಂಡಿದೆ ಎಂದು ಮುಖ್ಯಮಂತ್ರಿ ನೈಪಿಯು ರಿಯೋ ಅವರು 2013 ಜುಲೈನಲ್ಲಿ ಅಸೆಂಬ್ಲಿಯಲ್ಲೇ ಬಹಿರಂಗವಾಗಿ ಒಪ್ಪಿಕೊಂಡಿದ್ದರು.

2014 ಆಗಸ್ಟ್ 21 ರಂದು ಕೇರಳದ ಉಮ್ಮನ್ ಚಾಂಡಿ ನೇತೃತ್ವದ ಸರಕಾರವು, ಕೇರಳದಲ್ಲಿ ಹಂತಹಂತವಾಗಿ ಮದ್ಯವನ್ನು ನಿಷೇಧಿಸಲಾಗುತ್ತದೆ ಎಂದು ಘೋಷಿಸಿತಲ್ಲದೇ ವರ್ಷಂಪ್ರತಿ ಬಾರ್‌ಗಳ ಪರವಾನಿಗೆ ನವೀಕರಣ ಮಾಡುವುದನ್ನು ಇನ್ನು ಮುಂದೆ ರದ್ದು ಪಡಿಸುವುದಾಗಿ ಸಾರಿತು. ಮಾತ್ರವಲ್ಲ, 2014 ಮಾರ್ಚ್ 31 ರಿಂದ ಅನ್ವಯವಾಗುವಂತೆ 418 ಬಾರ್‌ಗಳ ಪರವಾನಿಗೆಯನ್ನೂ (ಲೈಸೆನ್ಸ್) ರದ್ದು ಪಡಿಸಿತು. ಉಳಿದ 313 ಬಾರ್‌ಗಳ ಪರವಾನಿಗೆಯನ್ನು 2015ರಲ್ಲಿ ರದ್ದು ಪಡಿಸುವುದಾಗಿಯೂ ಅದು ಘೋಷಿಸಿತು. ಕೇರಳದಲ್ಲಿ ಒಟ್ಟು 14 ಫೈವ್‌ಸ್ಟಾರ್ ಹೋಟೇಲ್‌ಗಳಿದ್ದು 2015 ಏಪ್ರಿಲ್ ಒಂದರಿಂದ ಕೇವಲ 5 ಫೈವ್‌ಸ್ಟಾರ್ ಹೋಟೇಲ್ ಗಳಲ್ಲಿ ಮಾತ್ರ ಮದ್ಯ ಲಭ್ಯವಾಗುವಂತೆ ನೋಡಿಕೊಳ್ಳಲಾಗುವುದು ಎಂದೂ ಆಶ್ವಾಸನೆ ನೀಡಿತು.

ಅಂದ ಹಾಗೆ, ನಕಲಿ ಮದ್ಯಪಾನದಿಂದಾಗಿ ಪ್ರಾಣ ಹಾನಿ, ಅನಾಹುತ ಸಂಭವಿಸಿದರೆ ಅಪರಾಧಿಗಳಿಗೆ ಮರಣ ದಂಡನೆ ವಿಧಿಸುವ ಕಠಿಣ ಕಾನೂನು ಇರುವ ಈ ದೇಶದ ಏಕೈಕ ರಾಜ್ಯವೊಂದಿದ್ದರೆ ಅದು ಗುಜರಾತ್ ಮಾತ್ರ. 1958ರಲ್ಲೇ ಗುಜರಾತಿನಲ್ಲಿ ಮದ್ಯಕ್ಕೆ ನಿಷೇಧ ವಿಧಿಸಲಾಗಿದೆ. ಆದರೆ ಇವತ್ತು (2014) ಗುಜರಾತಿನಲ್ಲಿ ಅಕ್ರಮ ಮದ್ಯ ತಯಾರಿ ಮತ್ತು ಮಾರಾಟ ವ್ಯಾಪಕವಾಗಿದೆ ಎಂದು ಹೇಳಲಾಗುತ್ತಿದೆ.

ಆಂಧ್ರ ಪ್ರದೇಶದಲ್ಲಿ 1952ರಲ್ಲೇ ಮದ್ಯಕ್ಕೆ ನಿಷೇಧ ವಿಧಿಸಲಾಗಿತ್ತು. ಆಗ ಆಂಧ್ರಪ್ರದೇಶಕ್ಕೆ ಇದ್ದ ಹೆಸರು ಮದರಾಸ್ ಸ್ಟೇಟ್. ಮುಖ್ಯಮಂತ್ರಿಯಾಗಿದ್ದುದು ಸಿ.ರಾಜಗೋಪಾಲಾಚಾರಿ. ಈ ನಿಷೇಧ 1969ರಲ್ಲಿ ಕೊನೆಗೊಂಡಿತು. ಇದರ ಮಧ್ಯೆ ದುರ್ಬಗಂಟ ಎಂಬ ಗ್ರಾಮೀಣ ಜಿಲ್ಲೆಯ ಮಹಿಳೆಯರು ಮದ್ಯ ನಿಷೇಧದ ಪರ ಮತ್ತು ನಿಷೇಧ ಹಿಂತೆಗೆತದ ವಿರುದ್ಧ ತೀವ್ರ ಪ್ರತಿಭಟನೆ ನಡೆಸಿದರು. ಈ ಪ್ರತಿಭಟನೆಯ ಕಾವು ಎಷ್ಟು ಪ್ರಬಲವಾಗಿತ್ತೆಂದರೆ 1994ರಲ್ಲಿ ಮುಖ್ಯಮಂತ್ರಿ ಎನ್.ಟಿ.ರಾಮರಾವ್‌ರು ಮದ್ಯ ನಿಷೇಧಿಸಿ ಆದೇಶ ಹೊರಡಿಸಿದರು. ಆದರೆ 1997ರಲ್ಲಿ ಮುಖ್ಯಮಂತ್ರಿಯಾದ ಅವರ ಅಳಿಯ ಚಂದ್ರಬಾಬು ನಾಯ್ಡು ಅವರು ಮದ್ಯ ನಿಷೇಧವನ್ನು ಹಿಂತೆಗೆದುಕೊಂಡರು.

1996ರಲ್ಲಿ ಹರ್ಯಾಣ ವಿಕಾಸ್ ಪಾರ್ಟಿಯ ಬನ್ಸಿಲಾಲ್‌ರು ಚುನಾವಣಾ ಪ್ರಣಾಳಿಕೆಯಲ್ಲಿ ಭರವಸೆ ಕೊಟ್ಟಂತೆಯೇ ಹರ್ಯಾಣದಲ್ಲಿ ಸಂಪೂರ್ಣ ಪಾನ ನಿಷೇಧವನ್ನು ಜಾರಿಗೊಳಿಸಿದರು. ಆದರೆ ಮದ್ಯಪಾನಿಗಳಿಗೆ ಹೆಸರುವಾಸಿಯಾಗಿದ್ದ ಹರ್ಯಾಣದಲ್ಲಿ ಈ ನಿಷೇಧವು ಸಾರ್ವಜನಿಕ ಮತ್ತು ಒತ್ತಡ ಅಬಕಾರಿ ಆದಾಯದ ಸಮಸ್ಯೆಯನ್ನು ಸೃಷ್ಟಿ ಮಾಡಿತು. ಪಕ್ಷದೊಳಗೆ ಮತ್ತು ಹೊರಗೆ ಅಪಸ್ವರಗಳು ಕೇಳಿ ಬಂದುವು. ಕೊನೆಗೆ 1998ರಲ್ಲಿ ನಿಷೇಧವನ್ನು ಹಿಂತೆಗೆದುಕೊಳ್ಳಲಾಯಿತು.

1995ರಲ್ಲಿ ಮಿಝೋರಾಮ್‌ನಲ್ಲಿ Liquor Total Prohibition (MITP) Act- ಮಿಝೋರಾಮ್‌ನಲ್ಲಿ ಸಂಪೂರ್ಣ ಮದ್ಯ ನಿಷೇಧ ಕಾಯ್ದೆಯು ಜಾರಿಗೆ ಬಂದು ಮದ್ಯ ಮಾರಾಟ ಮತ್ತು ಉತ್ಪಾದನೆಗೆ ನಿಷೇಧ ಹೇರಲಾಯಿತು. ಮಿಝೋರಾಮ್‌ನಲ್ಲಿ ಜನಸಂಖ್ಯೆಯಲ್ಲಿ

ಶೇ.50ಕ್ಕಿಂತಲೂ ಅಧಿಕ ಮಂದಿ ಕ್ರೈಸ್ತ ಧರ್ಮೀಯರು. ಅಲ್ಲಿನ ಪ್ರಭಾವಿ Presbyterian ಚರ್ಚ್ ಬೃಹತ್ ಮಟ್ಟದ ಪ್ರತಿಭಟನೆ ನಡೆಸಿ ಮದ್ಯ ನಿಷೇಧಕ್ಕೆ ಒತ್ತಾಯಿಸಿತ್ತು. ಆದರ ಒತ್ತಾಯವನ್ನು ಮನ್ನಿಸಿಯೇ ನಿಷೇಧ ಹೇರಲಾಗಿತ್ತು. ಆದರೆ ಈ ನಿಷೇಧದಲ್ಲಿ ಯಾತ್ರಾರ್ಥಿಗಳಿಗೆ ತಮ್ಮ ಜೊತೆ ಮದ್ಯ ತರಲು ಅವಕಾಶ ನೀಡಲಾಗಿತ್ತು. 2007ರಲ್ಲಿ ಈ ಮದ್ಯ ನಿಷೇಧ ಕಾಯ್ದೆಯಲ್ಲಿ ಕೊಂಚ ಸಡಿಲಿಕೆ ಮಾಡಲಾಯಿತಲ್ಲದೇ ದ್ರಾಕ್ಷೆಯಿಂದ ವೈನ್ ತಯಾರಿಸಲು ಅನುಮತಿ ನೀಡಲಾಯಿತು. ಆದರೆ ಈ ನಿಷೇಧದ 17 ವರ್ಷಗಳ ಬಳಿಕ ಅಂದರೆ 2014 ಜುಲೈ 10 ರಂದು ಮದ್ಯ ನಿಷೇಧವನ್ನು ಸಂಪೂರ್ಣವಾಗಿ ರದ್ದುಗೊಳಿಸಲಾಯಿತು. ಇದನ್ನು ಪ್ರತಿಭಟಿಸಿ Presbyterian ಚರ್ಚ್ ಮಿಝೋರಾಮ್‌ನಾದ್ಯಂತ ಎಲ್ಲ ಚರ್ಚ್‌ಗಳಲ್ಲಿ ಬೃಹತ್ ಪ್ರಾರ್ಥನಾ ಶಿಬಿರಗಳನ್ನು ಹಮ್ಮಿಕೊಂಡಿತು. ಸರಕಾರ ನಕಲಿ ಮದ್ಯ ಹಾವಳಿಯ ನೆಪವೊಡ್ಡಿ ಪ್ರತಿಭಟನೆಯನ್ನು ನಿರ್ಲಕ್ಷಿಸಿತು.

1953ರಲ್ಲೇ ತಮಿಳುನಾಡಿನಲ್ಲಿ (ಆಗಿನ ಮದ್ರಾಸ್ ಸ್ಟೇಟ್) ಮದ್ಯಕ್ಕೆ ನಿಷೇಧ ವಿಧಿಸಲಾಗಿತ್ತು. ಈ ನಿಷೇಧವು 1971ರ ವರೆಗೂ ಜಾರಿಯಲ್ಲಿತ್ತು. ಆದರೆ 1972ರಲ್ಲಿ ಅಧಿಕಾರಕ್ಕೆ ಬಂದ ಡಿ.ಎಂ.ಕೆ.ಯ ಕರುಣಾನಿಧಿಯವರು ಈ ನಿಷೇಧವನ್ನು ರದ್ದುಗೊಳಿಸಿದರು. 1977ರಲ್ಲಿ ಮುಖ್ಯಮಂತ್ರಿ 'ಎಂ.ಜಿ.ರಾಮಚಂದ್ರನ್ ಅವರು ಮದ್ಯದ ಕುರಿತಂತೆ ಕೆಲವು ನಿಯಂತ್ರಣಗಳನ್ನು ಹೇರಿದರು. ಆ ಬಳಿಕ ಕರುಣಾನಿಧಿಯವರು ಮುಖ್ಯಮಂತ್ರಿಯಾದಾಗ ಈ ನಿಯಂತ್ರಣವನ್ನೂ ತೆಗೆದುಹಾಕಿ ಮದ್ಯವನ್ನು ಮುಕ್ತಗೊಳಿಸಿದರು. ನಂತರ ಅಧಿಕಾರಕ್ಕೆ ಬಂದ ಜಯಲಲಿತಾ ಅವರು ಸರಕಾರಕ್ಕೆ ಲಾಭದಾಯಕವಾಗುವ ರೀತಿಯಲ್ಲಿ ಮದ್ಯದ ಮೇಲೆ ನಿಯಂತ್ರಣಗಳನ್ನು ಹೇರಿದರು.

ಒಂದು ರೀತಿಯಲ್ಲಿ ನಿಷೇಧ ಮತ್ತು ಹಿಂತೆಗೆತ ಎಂಬ ನಾಟಕವು ಸ್ವಾತಂತ್ರ್ಯ ನಂತರದ ಭಾರತದಲ್ಲಿ ನಡೆಯುತ್ತಲೇ ಬಂದಿದೆ. ಮದ್ಯಕ್ಕೆ ನಿಷೇಧ ವಿಧಿಸಿದರೂ ನಕಲಿ ಮದ್ಯದ ಹಾವಳಿಯನ್ನು ತಡೆಗಟ್ಟುವಲ್ಲಿ ಸರಕಾರಗಳು ವಿಫಲವಾಗುತ್ತಲೇ ಬಂದಿವೆ ಅಥವಾ ನಿಷೇಧವನ್ನು ಹಿಂತೆಗೆದುಕೊಳ್ಳುವುದಕ್ಕಾಗಿಯೋ ಏನೋ ನಕಲಿ ಹಾವಳಿಗೆ ಸಂದರ್ಭಗಳನ್ನು ಒದಗಿಸುತ್ತಲೇ ಬಂದಿವೆ. ಕರ್ನಾಟಕದಲ್ಲಿ ಸರಕಾರವು ಮದ್ಯದಿಂದ ಪ್ರತಿವರ್ಷ ಅಂದಾಜು 2400 ಕೋಟಿ ರೂಪಾಯಿ ವರಮಾನ ಗಳಿಸುತ್ತಿದೆ. ಇದು ಬಜೆಟ್‌ನ ಒಟ್ಟು ಮೊತ್ತದ ಶೇ.25 ರಷ್ಟು. ಈ ದೇಶದಲ್ಲಿ ಇವತ್ತು ಮದ್ಯಪಾನಿಗಳ ಸಂಖ್ಯೆಯಲ್ಲಿ ಕ್ರೈಸ್ತರು ಮೊದಲ ಸ್ಥಾನದಲ್ಲಿದ್ದರೆ (ಶೇ. 61.2) ಕೊನೆಯ ಸ್ಥಾನವನ್ನು ಮುಸ್ಲಿಮರು (ಶೇ. 9.4) ಪಡಕೊಂಡಿದ್ದಾರೆ (2013–2014ರ ವರದಿ). ಭಾರತ ಸರಕಾರದ ವರದಿಯ ಪ್ರಕಾರ, ಈ ದೇಶದಲ್ಲಿ ಮದ್ಯಪಾನಿ ಪುರುಷರು ಶೇ. 21ರಷ್ಟು ಇದ್ದರೆ ಮಹಿಳೆಯರ ಪ್ರಮಾಣ ಶೇ.2. ನಿಜವಾಗಿ ಇದರ ದುಪ್ಪಟ್ಟು ಪ್ರಮಾಣದಲ್ಲಿ ಮದ್ಯಪಾನಿಗಳಿದ್ದಾರೆಂದು ಅಂದಾಜಿಸಲಾಗುತ್ತಿದೆ. Alcohol-Drugs Information Centre India- ಎಂಬ ಕೇರಳದ ಸರಕಾರೇತರ (NGO) ಸಂಸ್ಥೆಯ ಪ್ರಕಾರ, ಮದ್ಯದ ಮೊದಲ ರುಚಿಯನ್ನು ನೋಡುವವರ ಪ್ರಾಯವು (ಪ್ರಥಮವಾಗಿ ಮದ್ಯ ಕುಡಿಯುವವರು) ಇವತ್ತು

19 ರಿಂದ 13ಕ್ಕೆ ಕುಸಿದಿದೆ- (2014ರ ವರದಿ). ಮದ್ಯಪಾನ ಸಂಬಂಧಿ ಕಾಯಿಲೆಗೀಡಾದ ರೋಗಿಗಳನ್ನು ಸೇರಿಸಲಾದ ದೇಶದ ಪ್ರಮುಖ ಆಸ್ಪತ್ರೆಗಳಿಂದ ಪಡೆಯಲಾದ ಇತ್ತೀಚಿನ (2013) ವರದಿಯ ಪ್ರಕಾರ, ಇವರಲ್ಲಿ ಶೇ. 18ರಷ್ಟು ಮಂದಿ ಮಾನಸಿಕ ಸಮಸ್ಯೆ, ಶೇ. 20ರಷ್ಟು ಮಂದಿ ಮೆದುಳಿನ ಸಮಸ್ಯೆ ಮತ್ತು ಶೇ. 60ರಷ್ಟು ಮಂದಿ ದೈಹಿಕ ಗಾಯಗಳ ಸಮಸ್ಯೆಯಿಂದ ನರಳುತ್ತಿದ್ದಾರೆ. ವಿಶ್ವ ಆರೋಗ್ಯ ಸಂಸ್ಥೆಯ (WHO) 2014ರ ವರದಿ ಹೇಳುವಂತೆ, ಮದ್ಯಪಾನ ಮಾಡಿದ ಪ್ರತಿ ಮೂವರಲ್ಲಿ ಓರ್ವರು ಗೃಹ ಹಿಂಸೆಯಲ್ಲಿ ಭಾಗಿಯಾಗಿರುತ್ತಾರೆ. 2013ರಲ್ಲಿ National Institute of Mental Health and Neuro Sciences (ನಿಮ್ಹಾನ್ಸ್) ಸಂಸ್ಥೆಯು ಬೆಂಗಳೂರಿನ ಸುತ್ತಮುತ್ತಲಿರುವ 28,500 ಮಂದಿಯ ಮೇಲೆ ಅಧ್ಯಯನ ನಡೆಸಿತು. ಆ ಅಧ್ಯಯನದ ಫಲಿತಾಂಶ ಎಷ್ಟು ಆಘಾತಕಾರಿಯಾಗಿತ್ತೆಂದರೆ ಮದ್ಯಪಾನದಿಂದ ಕಾಯಿಲೆಗೀಡಾದವರಿಗೆ ಪ್ರತಿ ತಿಂಗಳು ಖರ್ಚು ಮಾಡುವ ಮೊತ್ತವು ಅವರ ಸರಾಸರಿ ತಿಂಗಳ ಆದಾಯಕ್ಕಿಂತ ಜಾಸ್ತಿಯಾಗಿದೆ ಎಂದಾಗಿತ್ತು.

ಭಾರತದ ಬಿಯರ್ ಕಂಪೆನಿಗಳು 4.32 ಮಿಲಿಯನ್ ಹೆಕ್ಟೋಲೀಟರ್ ಬಿಯರ್ ಉತ್ಪಾದಿಸುತ್ತಿದ್ದು ಪ್ರತಿವರ್ಷ ಇದರಲ್ಲಿ ಶೇ. 17ರಷ್ಟು ಏರಿಕೆಯಾಗುತ್ತಿದೆ. ಭಾರತದ ಮದ್ಯ ತಯಾರಿಕಾ ಕಾರ್ಖಾನೆಗಳು (The Spirit Industries in India) ಇವತ್ತು ಮೂರು ರೀತಿಯಲ್ಲಿ ವಿಭಜನೆಗೊಂಡಿದೆ.

1. ಭಾರತದಲ್ಲಿ ತಯಾರಿಸಲಾಗುವ ವಿದೇಶಿ ಮದ್ಯ (India Made Foriegn Liquor (IMFL)) ಇದರಲ್ಲಿ ವಿಸ್ಕಿ, ಜಿನ್, ರಮ್, ಬ್ರಾಂಡಿ, ವೋಡ್ಕಾಗಳು ಸೇರಿವೆ.

2. ಭಾರತದಲ್ಲಿ ತಯಾರಿಸುವ ಕಂಟ್ರಿ ಮದ್ಯ- ಇದರಲ್ಲಿ ಅರ್ರಾಕ್, ದೇಶೀ ಶರಾಬು ಮತ್ತು ತಾರಿ ಸೇರಿವೆ.

3. ಅಕ್ರಮ ಮದ್ಯ ತಯಾರಿಕಾ ಸಂಸ್ಥೆಗಳು.

ಮದ್ಯ ಉತ್ಪಾದನಾ ಕ್ಷೇತ್ರವು ಎಷ್ಟು ವಿಸ್ತಾರವಾಗಿದೆಯೆಂದರೆ 1.5 ಮಿಲಿಯನ್ ಮಂದಿ ಮದ್ಯ ತಯಾರಿ ಮತ್ತು ಮಾರಾಟ ರಂಗದಲ್ಲಿ ತೊಡಗಿಸಿಕೊಂಡಿದ್ದಾರೆ. ಹೀಗೆ ದೊಡ್ಡ ಪ್ರಮಾಣದಲ್ಲಿ ಉದ್ಯೋಗ ನೀಡಿರುವ ಮತ್ತು ವರ್ಷಂಪ್ರತಿ ತಯಾರಿಕೆಯಲ್ಲಿ ಹೆಚ್ಚಳ ಗೊಳ್ಳುತ್ತಿರುವ ಈ ಕ್ಷೇತ್ರವು ಅಷ್ಟೇ ದೊಡ್ಡ ಪ್ರಮಾಣದಲ್ಲಿ ರೋಗಗಳನ್ನು ತಯಾರಿಸುತ್ತಿದ್ದು ದೇಶದಲ್ಲಿ ಮದ್ಯ ಸಂಬಂಧಿ ರೋಗಗಳಿಗೆ ಚಿಕಿತ್ಸೆ ನೀಡುವ ವೈದ್ಯರ ಭಾರೀ ಕೊರತೆಯಿದೆ. ಮುಂದಿನ ನಾಲ್ಕು ವರ್ಷಗಳಲ್ಲಿ (2014 ರಿಂದ) ಈ ಕೊರತೆಯನ್ನು ತುಂಬುವ ಯೋಜನೆ ಸರಕಾರದ್ದು, ಆದ್ದರಿಂದಲೇ ಆಲ್ ಇಂಡಿಯಾ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್ (AIIMS)ನ ಮೂಲಕ ಸಾವಿರ ವೈದ್ಯರಿಗೆ ಮತ್ತು 500ರಷ್ಟು ದಾದಿಯರಿಗೆ ತರಬೇತಿ ನೀಡಲು ಸರಕಾರ ಯೋಜನೆ ಸಿದ್ಧಪಡಿಸಿದೆ.

ಭಾರತದಲ್ಲಿ ಮದ್ಯಪಾನಿಗಳ ಸಂಖ್ಯೆ ಜಾಸ್ತಿಯಾಗುತ್ತಿದೆ ಎಂದು ಅಂಕಿ ಅಂಶಗಳು

ದೃಢ ಪಡಿಸುತ್ತಿವೆ. Associated Chambers of Commerce and Industry of India (ASSOCHAM) ಸಂಸ್ಥೆಯು 2014ರಲ್ಲಿ ಬಿಡುಗಡೆಗೊಳಿಸಿದ ವರದಿಯ ಪ್ರಕಾರ, 2015ರ ವೇಳೆಗೆ ಭಾರತದಲ್ಲಿ ಮದ್ಯದ ಬಳಕೆಯು 19 ಸಾವಿರ ಮಿಲಿಯನ್ ಲೀಟರ್‌ಗೆ ಏರಲಿದ್ದು ಇದು ಈ ಹಿಂದಿನ ಎಲ್ಲಾ ಉತ್ಪಾದನೆಯನ್ನೂ ಮೀರಲಿದೆ. 2011ರಲ್ಲಿ 6,700 ಮಿಲಿಯನ್ ಲೀಟರ್ ಮದ್ಯ ಉತ್ಪಾದಿಸಲಾಗಿತ್ತು. ಈ ದೇಶದಲ್ಲಿ ಸಂದರ್ಭಾನುಸಾರ ಮದ್ಯಪಾನ ಮಾಡುವವರ ಸಂಖ್ಯೆ 62.5 ಮಿಲಿಯನ್. ಸಾಕಷ್ಟು ಯುರೋಪಿಯನ್ ರಾಷ್ಟ್ರಗಳಿಗಿಂತ ಭಿನ್ನವಾಗಿ ಭಾರತದಲ್ಲಿ ಅತ್ಯಂತ ವೇಗವಾಗಿ ಮದ್ಯ ಬಳಕೆದಾರರ ಸಂಖ್ಯೆ ಏರುತ್ತಿದೆ. ಈ ಏರುವಿಕೆಯ ಗತಿ ಬಹಳ ವೇಗವಾಗಿದೆ. 1970-1995ರ ನಡುವೆ ಶೇ. 106.7ರಷ್ಟು ಹೆಚ್ಚಳವಾಗಿದೆ. ಭಾರತ ಅಪಾರ ಪ್ರಮಾಣದ ಜನಸಂಪತ್ತನ್ನು ಹೊಂದಿರುವುದು ವಿದೇಶಿ ಮದ್ಯ ಕಂಪೆನಿಗಳ ಕಣ್ಣು ಇತ್ತ ಬೀಳುವಂತೆ ಮಾಡಿದೆ. ಅವು ಭಾರತದಲ್ಲಿ ಮದ್ಯ ಮಾರಾಟ ಮತ್ತು ಉತ್ಪಾದನೆಗೆ ಆಸಕ್ತಿ ತೋರಿಸುತ್ತಿವೆ. ಜಾಗತಿಕವಾಗಿಯೇ ಭಾರತವು ಮದ್ಯಕ್ಕೆ 3ನೇ ದೊಡ್ಡ ಮಾರುಕಟ್ಟೆ. ದಕ್ಷಿಣ ಪೂರ್ವ ಏಶ್ಯಾದಲ್ಲಿ ತಯಾರಾಗುವ ಒಟ್ಟು ಮದ್ಯಗಳ ಪೈಕಿ ಶೇ. 65ರಷ್ಟು ಭಾರತದಲ್ಲಿಯೇ ತಯಾರಾಗುತ್ತಿದೆ. ಒಂದು ರೀತಿಯಲ್ಲಿ ಭಾರತವು ಜಾಗತಿಕವಾಗಿಯೇ ಇವತ್ತು ಅತಿದೊಡ್ಡ ಮದ್ಯ ಉತ್ಪಾದಕ ರಾಷ್ಟ್ರ. ಬಾರ್‌ಗಳು, ಡ್ಯಾನ್ಸ್‌ಕ್ಲಬ್‌ಗಳು ಮತ್ತು ಮದ್ಯ ಮಾರಾಟ ಮಳಿಗೆಗಳು ಈ ದೇಶದಲ್ಲಿ ವರ್ಷಂಪ್ರತಿ ತೀವ್ರಗತಿಯಲ್ಲಿ ಏರಿಕೆಯಾಗುತ್ತಿವೆ. ಕೇರಳದಲ್ಲಿ ವ್ಯಕ್ತಿಯೋರ್ವ ಪ್ರತಿದಿನ ಸರಾಸರಿ 8 ಲೀಟರ್ (2014ರ ವರದಿ) ಮದ್ಯ ಸೇವಿಸುತ್ತಾನೆ. ಇದು ಭಾರತದ ಇತರ ರಾಜ್ಯಗಳಿಗೆ ಹೋಲಿಸಿದರೆ ನಾಲ್ಕು ಪಟ್ಟು ಹೆಚ್ಚು. ಹರ್ಯಾಣ ಮತ್ತು ಪಂಜಾಬ್‌ಗಳಲ್ಲೂ ಇವತ್ತು ವಿಪರೀತ ಪ್ರಮಾಣದಲ್ಲಿ ಮದ್ಯಪಾನಿಗಳಿದ್ದಾರೆ. ಭಾರತದ ಒಟ್ಟು ಮದ್ಯಪಾನಿಗಳಲ್ಲಿ ಅರ್ಧದಷ್ಟು ಮಂದಿ ಅವನ್ನು ತೀವ್ರವಾಗಿ ಹಚ್ಚಿಕೊಂಡಿದ್ದಾರೆ ಎಂದು Lancet ಸಂಸ್ಥೆಯು ತನ್ನ ಸಮೀಕ್ಷಾ ವರದಿಯಲ್ಲಿ ತಿಳಿಸಿದೆ. ಸುಮಾರು 14 ಮಿಲಿಯನ್ ಮಂದಿ ಈ ದೇಶದಲ್ಲಿ ಮದ್ಯದ ಚಟಕ್ಕೆ ಬಿದ್ದಿದ್ದು ಅವರಿಗೆ ನೆರವಿನ ಅಗತ್ಯವಿದೆಯೆಂದು ಲ್ಯಾನ್ಸೆಟ್ ಅಭಿಪ್ರಾಯಪಟ್ಟಿದೆ. ಹೀಗೆ ಒಂದು ಕಡೆ ಮದ್ಯಪಾನಿಗಳ ಮತ್ತು ಮದ್ಯ ತಯಾರಿಕೆಯ ಪ್ರಮಾಣದಲ್ಲಿ ಅಪಾರ ಹೆಚ್ಚಳವಾಗುತ್ತಿದ್ದರೆ ಇನ್ನೊಂದು ಕಡೆ ಸಾವುಗಳ ಸಂಖ್ಯೆಯಲ್ಲೂ ಏರಿಕೆಯಾಗುತ್ತಿದೆ. 2011ಕ್ಕೆ ಹೋಲಿಸಿದರೆ 2012ರಲ್ಲಿ ಮದ್ಯದಿಂದಾಗುವ ಸಾವಿನ ಅನಾಹುತದಲ್ಲಿ ಶೇ. 20ರಷ್ಟು ಹೆಚ್ಚಳವಾಗಿದೆ. ರಾಷ್ಟ್ರೀಯ ಅಪರಾಧ ದಾಖಲೆಗಳ ಸಂಸ್ಥೆಯ (National Crime Record Bureau (NCRB)) ಪ್ರಕಾರ ಕಳೆದ 5 ವರ್ಷಗಳಲ್ಲಿ (2008-2013) ಮದ್ಯಪಾನ ಸಂಬಂಧಿ ಸಾವುಗಳಲ್ಲಿ ತೀವ್ರಗತಿಯ ವೃದ್ಧಿಯಾಗಿದೆ. ಈ ಅವಧಿಯಲ್ಲಿ ಶೇ. 27ರಷ್ಟು ಹೆಚ್ಚಳವಾಗಿದ್ದು 2008ರಲ್ಲಿ 4308 ಮಂದಿ ಮದ್ಯಕ್ಕೆ ಬಲಿಯಾಗಿದ್ದಾರೆ. 2013ರಲ್ಲಿ 478 ಮಂದಿ ಬಲಿಯಾಗಿದ್ದಾರೆ, ಅದರಲ್ಲಿ 2011 ಮತ್ತು 2012ರ ಮಧ್ಯೆ ಶೇ. 2ರಷ್ಟು ಹೆಚ್ಚಳವಾಗಿದೆ.

ಮದ್ಯಪಾನದಿಂದಾಗಿ 2012ರಲ್ಲಿ ವಿವಿಧ ರಾಜ್ಯಗಳಲ್ಲಿ ನಡೆದ ಸಾವುಗಳ ವಿವರ-

(1) ಮಹಾರಾಷ್ಟ್ರ-1514, (2) ಮಧ್ಯಪ್ರದೇಶ- 564 (3) ಕರ್ನಾಟಕ- 41: (4) ಹರ್ಯಾಣ- 367 (5) ಪಂಜಾಬ್- 273

2011ರಲ್ಲಿ ಈ ಸಾವುಗಳ ಪಟ್ಟಿಯಲ್ಲಿ ಮಹಾರಾಷ್ಟ್ರ ಮೊದಲ ಸ್ಥಾನ (485)ದಲ್ಲಿದ್ದರೆ ಕರ್ನಾಟಕ (304) ದ್ವಿತೀಯ ಸ್ಥಾನದಲ್ಲಿತ್ತು.

ನಿಜವಾಗಿ ಮದ್ಯಪಾನವು ಯಾವೆಲ್ಲ ರಾಷ್ಟ್ರಗಳಲ್ಲಿ ಹೆಚ್ಚಿದೆಯೋ ಅದರಲ್ಲೂ ಯಾವೇ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅಧಿಕವಾಗಿದೆಯೋ ಆ ಎಲ್ಲ ರಾಷ್ಟ್ರಗಳಲ್ಲಿ ಲೈಂಗಿಕ ರೋಗಗಳು ಮತ್ತ ಇನ್ನಿತರ ಕಾಯಿಲೆಗಳು ಅಧಿಕ ಪ್ರಮಾಣದಲ್ಲಿರುವುದನ್ನು ಅಂಕಿ-ಅಂಶಗಳು ಸ್ಪಷ್ಟಪಡಿಸುತ್ತವೆ ಒಂದಕ್ಕಿಂತ ಅಧಿಕ ಲೈಂಗಿಕ ಸಂಬಂಧಗಳನ್ನು ಹೊಂದುವ ಪ್ರಕರಣಗಳಿಗೆ ಮದ್ಯವು ಪ್ರಮುಖ ಪ್ರಚೋದಕವಾಗಿ ಕೆಲಸ ಮಾಡುತ್ತಿದೆ. ಮನೆಯೊಳಗೂ ಹೊರಗೂ ಒಂದು ಬಗೆಯ ಅನಿಯಂತ್ರಿತ, ಅನೈತಿಕ ಚಿಂತನೆಗಳನ್ನು ಹುಟ್ಟುಹಾಕುವಲ್ಲಿ ಮತ್ತು ಮನೆಯ ಸದಸ್ಯರ ನಡುವ ಅಪನಂಬಿಕೆ ಮತ್ತು ಅಸಹಿಷ್ಣುತೆಯನ್ನು ಹುಟ್ಟು ಹಾಕುವಲ್ಲಿ ಮದ್ಯಕ್ಕೆ ಪ್ರಮುಖ ಪಾತ್ರವಿದೆ. ಈ ದೇಶದ ಪ್ರತಿ ಪೊಲೀಸ್ ಠಾಣೆಗೂ ಮದ್ಯ ಸಂಬಂಧಿ ದೂರುಗಳು ಪ್ರತಿದಿನವೂ ಬರುತ್ತಲೇ ಇವೆ. ಹಾಗೆ ದೂರು ಕೊಡುವವರಲ್ಲಿ ಮಹಿಳೆಯರೇ ಅಧಿಕವಿರುತ್ತಾರೆ. ಮದ್ಯಪಾನಕ್ಕೆ ದುಡ ಕೊಡೆಂದು ಪತ್ನಿಯನ್ನು ಪೀಡಿಸುವ ಮತ್ತು ಕೊಡದೇ ಇದ್ದರೆ ಪತ್ನಿ-ಮಕ್ಕಳ ಮೇಲೆ ಹಃ ನಡೆಸುವ ಪ್ರಕರಣಗಳು ದಿನನಿತ್ಯ ವರದಿಯಾಗುತ್ತಿವೆ.

## ಉತ್ಪನ್ನಗಳು ಮತ್ತು ಸಾಂಸ್ಕೃತಿಕ ವಾದಗಳು

ಅಂದ ಹಾಗೆ ಯಾವ ಉತ್ಪನ್ನವೂ ಕೇವಲ ವಸ್ತುವಲ್ಲ. ಅದೊಂದು ಸಂಸ್ಕೃತಿಯ ಜೀವನಕ್ರಮದ ಸಂಕೇತ. ಬಟ್ಟೆಯನ್ನೇ ತೆಗೆದುಕೊಳ್ಳಿ, ಅದು ಕೇವಲ ಮೈಮುಚ್ಚುವ ವಸ್ತುವಾಗಿಯಷ್ಟೇ ಇವತ್ತೂ ಈ ಹಿಂದೆಯೂ ಗುರುತಿಸಿಕೊಂಡಿಲ್ಲ. ಅದು ಸಂಸ್ಕೃತಿಯನ ಬಿಂಬಿಸುತ್ತದೆ. ಅರಬರ ಉಡುಪಿಗೂ ಅವರ ಸಂಸ್ಕೃತಿಗೂ ಸಂಬಂಧ ಇದೆ. ಅರಬರು ಯಾವ ಬಗೆಯ ಉಡುಪನ್ನು ಧರಿಸುತ್ತಾರೋ ಆ ಬಗೆಯ ಉಡುಪನ್ನು ಬರ್ಮಾ ದೇಶದವರ ಧರಿಸುವುದಿಲ್ಲ. ಹಾಗೆ ಅವರು ತೊಡದೇ ಇರುವುದಕ್ಕೆ ಅದು ಅರಬರ ಉಡುಪು ಎಂಬ ಗುರುತ ಕಾರಣವೂ ಅಲ್ಲ. ಪ್ರತಿಯೊಂದಕ್ಕೂ ಅದರದ್ದೇ ಆದ ಸಂಸ್ಕೃತಿ, ತನ್ನತನ ಮತ್ತು ಸೌಂದರ್ಯದ ಕಲ್ಪನೆಯಿದೆ. ಬರ್ಮಾದ ಪುರುಷರು ಧರಿಸುವ ಉಡುಪನ್ನು ಭಾರತದಲ್ಲಿ ಸಾಮಾನ್ಯವಾಗ ಮಹಿಳೆಯರು ಧರಿಸುತ್ತಾರೆ. ಮುಸ್ಲಿಮ್ ಮಹಿಳೆಯರು ತೊಡುವ ಬುರ್ಖಾದಂಥ ಉಡುಪನ ಬರ್ಮಾದ ಪುರುಷರು ತೊಡುತ್ತಾರೆ. ಅಮೇರಿಕನ್ನರ ಸೂಟು-ಬೂಟು ಭಾರತದಲ್ಲಿ ಅಧಿಕಾ ಮತ್ತು ಉನ್ನತ ವರ್ಗಗಳಲ್ಲಿ ಕಾಣಿಸುತ್ತದೆಯೇ ಹೊರತು ಸಾಮಾನ್ಯರಲ್ಲಲ್ಲ. ಅದರಲ್ಲೂ ಈ ಉಡುಪನ್ನು ಈ ದೇಶಕ್ಕೆ ಪರಿಚಯಿಸಿದ್ದೇ ಕಾರ್ಪೊರೇಟ್ ವಲಯ. ಅಮೇರಿಕದ ಕುರಿತಂ ನಮ್ಮಲ್ಲಿ ಯಾವಾಗ ಆಸಕ್ತಿ ಹೆಚ್ಚಾಯಿತೋ ಅಥವಾ ಮುಂದುವರಿದ ರಾಷ್ಟ್ರಗಳ ಆಚಾರ-ವಿಚಾರ

ಉಡುಪು, ಆಹಾರ, ಹವ್ಯಾಸ, ನಿಲುವುಗಳು ಚಂದ ಅಂತ ಅನಿಸತೊಡಗಿತೋ ಆವಾಗ ಮದ್ಯಕ್ಕೊಂದು ಆಧುನಿಕ ಇಮೇಜ್ ಸಿಗತೊಡಗಿತು. ಆಧುನಿಕ ಮತ್ತು ಅಡ್ವಾನ್ಸ್‌ಡ್ ವ್ಯಕ್ತಿಯಾಗಿ ಗುರುತಿಸಿಕೊಳ್ಳಬೇಕಾದರೆ ಮದುವೆಯಲ್ಲಿ, ಔತಣಕೂಟದಲ್ಲಿ, ಬರ್ತ್‌ಡೇ ಪಾರ್ಟಿಗಳಲ್ಲಿ ಮತ್ತು ಇನ್ನಿತರ ಸಣ್ಣ-ದೊಡ್ಡ ಸಮಾರಂಭಗಳಲ್ಲಿ ಮದ್ಯಪಾನ ಇರಲೇಬೇಕು ಎಂಬ ನಿಯಮ ಬಲವಾಗತೊಡಗಿತು. ಅಮೇರಿಕನ್ನರು ಮದ್ಯದಲ್ಲಿ ನೋವುಗಳನ್ನು ಮರೆಯುತ್ತಾರೆಂದರೆ ನಾವೂ ಅದನ್ನು ಆ ಕಾರಣಕ್ಕಾಗಿ ಬಳಸಿಕೊಳ್ಳಬೇಕು ಎಂಬಂಥ ಆಲೋಚನೆಗಳಿಗೆ ಬಲ ಸಿಗತೊಡಗಿತು. ಕೋಟು-ಬೂಟು ಟೈಗಳುಳ್ಳವರ ನಡುವೆ ಮದ್ಯದ ಬಾಟಲಿಗಳು ಸದ್ದು ಮಾಡದೇ ಇರುವುದು ಘನತೆ ಮತ್ತು ಗೌರವಕ್ಕೆ ಕುಂದು ಎಂಬಂಥ ಆಲೋಚನೆಗಳು ಹುಟ್ಟಿಕೊಂಡು ಸಹಜ ಅನ್ನಿಸಿಕೊಳ್ಳತೊಡಗಿದುವು. ಇದಕ್ಕೆ ಪೂರಕವಾಗಿ ಮದ್ಯದ ಜಾಹೀರಾತುಗಳು, ಮದ್ಯವನ್ನು ಕಾಮನ್ ಆಗಿಸುವ ಸಿನಿಮಾಗಳು ಬರತೊಡಗಿದವು. ಸಿನಿಮಾಗಳಿಗೆ ತಿರುವು ಕೊಡುವ ಒಂದು ದೃಶ್ಯವಾಗಿ ಮದ್ಯಪಾರ್ಟಿಗಳು ಕಾಣಿಸಿಕೊಳ್ಳತೊಡಗಿದುವು. ಯಾರನ್ನೋ ಹತ್ಯೆ ಮಾಡುವುದಕ್ಕೆ, ಅತ್ಯಾಚಾರ ಎಸಗುವುದಕ್ಕೆ, ಗೆಳೆಯನ ಔತಣ ಸಮಾರಂಭವನ್ನು ಹಾಳುಗೆಡಹುವುದಕ್ಕೆ, ಸಂಚು-ತಂತ್ರ, ವಿನಾಶಕಾರಿ ವ್ಯೂಹ ರಚಿಸುವುದಕ್ಕೆ ಮದ್ಯಪಾನದ ದೃಶ್ಯ ಅನಿವಾರ್ಯ ಎಂದಾಗ ತೊಡಗಿತು. ಮಾತ್ರವಲ್ಲ, ಮಾಧ್ಯಮಗಳು ಇದಕ್ಕೆ ಸಾಥ್ ನೀಡತೊಡಗಿದುವು. ಗಾಂಧೀಜಿಯವರನ್ನು ಹೊಗಳುತ್ತಲೇ ಗಾಂಧೀಜಿ ಪ್ರಬಲವಾಗಿ ವಿರೋಧಿಸಿದ್ದ ಮದ್ಯವನ್ನು ಸಹಜವೆಂದು ಒಪ್ಪಿಕೊಳ್ಳುವ ಮತ್ತು ಅದರ ಪರ ವಹಿಸಿ ಮಾತಾಡುವವರ ಆಲೋಚನೆಗಳೋ ಜೀವನ ಚರಿತ್ರೆಗಳೋ ತೀರಾ ಸಹಜವೆಂಬಂತೆ ಪ್ರಕಟವಾಗ ತೊಡಗಿದುವು. ಮಾಧ್ಯಮ ಜಾಹೀರಾತುಗಳ ಭರಾಟೆಯೂ ಸಣ್ಣದಲ್ಲ. ಕ್ರಿಕೆಟ್ ಆಟವನ್ನು ಮತ್ತು ಆಟಗಾರರನ್ನು ಮದ್ಯ ಕಂಪೆನಿಗಳು ಖರೀದಿಸಿದುವು. ಪ್ರಮುಖ ಆಟಗಾರರು ತಮ್ಮ ಜೆರ್ಸಿ(ಟೀ ಶರ್ಟ್)ಯಲ್ಲಿ ಮದ್ಯ ಕಂಪೆನಿಗಳ ಲೋಗೋ ಧರಿಸುವಷ್ಟು ಮತ್ತು ಅಂಥ ಕಂಪೆನಿಗಳ ಅಂಬಾಸಡರ್ ಆಗಿ ಗುರುತಿಸಿಕೊಳ್ಳುವಷ್ಟು ಈ ಲಾಬಿ ಕೆಲಸ ಮಾಡಿದುವು. ಐಪಿಎಲ್ ಪಂದ್ಯಾವಳಿಯಂತೂ ಮದ್ಯದ ಪಾರ್ಟಿಗಳಿಲ್ಲದೆ ನಡೆಯಲಾರವು ಎಂಬಲ್ಲಿಗೆ ತಲುಪಿಬಿಟ್ಟವು. ಒಂದು ಕಾಲದಲ್ಲಿ ಮದ್ಯ ಎಂಬುದು ತೀರಾ ಜನಸಾಮಾನ್ಯರು ನೀರಾಮರದ ಕೆಳಗೆ ಕುಳಿತು ಸೇವಿಸುವ ಪೇಯವಷ್ಟೇ ಆಗಿತ್ತು. ಆ ದಿನಗಳಲ್ಲಿ ಪುರುಷರೇ ಹೆಚ್ಚು ಅದರ ದಾಸರಾಗಿದ್ದರು. ಅದಕ್ಕೆ ಆಧುನಿಕ ಖದರು ಬಂದಿರಲಿಲ್ಲ. ಮಹಿಳೆಯರು ಅದರ ಬಗ್ಗೆ ಒಂದು ಹಂತದವರೆಗೆ ಜಿಗುಪ್ಸೆ ಮತ್ತು ಆಕ್ರೋಶದ ನಿಲುವನ್ನು ಹೊಂದಿದ್ದರು. ಆದರೆ ಆಧುನಿಕ ಜಗತ್ತು ಇಂದಿನ ದಿನಗಳಲ್ಲಿ ಮದ್ಯಕ್ಕೆ ಫ್ಯಾಶನ್ ಐಡೆಂಟಿಟಿಯನ್ನು ಒದಗಿಸಿದೆ. ಅದನ್ನು ಸೇವಿಸುವುದು ಗೌರವಾರ್ಹ ಎಂಬ ವಾತಾವರಣವನ್ನು ಅದು ಸೃಷ್ಟಿಸಿ ಬಿಟ್ಟಿದೆ. ಆದ್ದರಿಂದಲೇ ಮಹಿಳೆಯರು ಕೂಡಾ ವಿವಿಧ ಪಾರ್ಟಿ ಮತ್ತು ಔತಣ ಕೂಟಗಳಲ್ಲಿ ಪುರುಷರೊಂದಿಗೆ ಕೈ ಜೋಡಿಸುತ್ತಿದ್ದಾರೆ. ವಿದೇಶಗಳಲ್ಲಿ ಪ್ರಾರಂಭವಾದ ಈ ಸಂಸ್ಕೃತಿಯು ಇವತ್ತು ಈ ದೇಶವನ್ನೂ ಅತ್ಯಂತ ಆಳವಾಗಿ ಆವರಿಸಿ ಬಿಟ್ಟಿದೆ. ನೋವುಗಳನ್ನು ಮರೆಯಲು, ನೆಮ್ಮದಿ ಪಡೆಯಲು, ಮದ್ಯದ ಗುಟುಕು ಉತ್ತಮ ಎಂಬ ಸಮರ್ಥನೆಗಳನ್ನು

ಆಧುನಿಕ ಪೀಳಿಗೆ ಕಂಡುಕೊಂಡಿದೆ. ಬಹುಶಃ ಮದ್ಯ ಕೇಂದ್ರಿತ ಜೀವನ ಶೈಲಿಯನ್ನು ಸಮಾಜ ನಿಧಾನವಾಗಿ ಅಪ್ಪಿಕೊಳ್ಳುತ್ತಿರುವಂತೆ ಮತ್ತು ವಾತಾವರಣ, ಸನ್ನಿವೇಶ, ಸಂದರ್ಭ, ದೇಶಗಳ ಹೊರತಾಗಿಯೂ ಮದ್ಯದ ಅನಿವಾರ್ಯತೆಯಿದೆ ಎಂಬ ಸೂಚನೆಯನ್ನು ರವಾನಿಸುತ್ತಿರುವಂತೆ ಕಾಣಿಸುತ್ತಿದೆ. ಬಹುಶಃ ಸೂಟು-ಬೂಟು-ಟೈಗಳನ್ನು ಜಗತ್ತಿನ ಎಲ್ಲ ವಾತಾವರಣ, ಸನ್ನಿವೇಶ, ಹವಾಮಾನಗಳಿಗೂ ಹೊಂದುವಂಥ ಮತ್ತು ಹೊಂದಬೇಕಾದ ಉಡುಪು ಎಂದು ಉನ್ನತ ವರ್ಗ ಕಲಿಸಿದಂತೆಯೇ ಮದ್ಯವನ್ನೂ ಅದೇ ಪಟ್ಟಿಯಲ್ಲಿಟ್ಟು, ಅದು ಹವಾಮಾನ, ದೇಶ, ಕಾಲ, ಸನ್ನಿವೇಶಗಳಿಗೆ ಅತೀತವಾದ ಸರ್ವಮಾನ್ಯ ಪೇಯ ಎಂದೇ ಕಲಿಸುವಲ್ಲಿ ಬಹುತೇಕ ಯಶಸ್ವಿಯಾಗಿದೆ.

ಆದರೆ ಪ್ರವಾದಿ ಮುಹಮ್ಮದ್‌ರು(ಸ) ನೆಮ್ಮದಿಯ ಹುಟುಕಾಟಕ್ಕೆ ಆರಾಧನೆಯನ್ನು ಪರ್ಯಾಯವಾಗಿ ಕಲಿಸಿದ್ದರು. ಆರಾಧನೆಯು ಮನಸ್ಸಿಗೆ ನೆಮ್ಮದಿ ಮತ್ತು ಪ್ರಾರ್ಥನೆಯು ಸರ್ವ ಸಂಕಟಗಳ ನಿವಾರಕವಾಗಿ ಕೆಲಸ ಮಾಡುತ್ತದೆ ಎಂದು ಹೇಳಿದ್ದರು. ಅವರು ಹಾಗೆ ಹೇಳಿದ್ದು ಮಾತ್ರವಲ್ಲ, ಅಂಥ ಒಂದು ಸಮಾಜವನ್ನು ಕಟ್ಟಿ ಬೆಳೆಸಿದ್ದರು. ಮದ್ಯಪಾನ ಮಾಡದ, ಮದ್ಯ ತಯಾರಿಸದ ಮತ್ತು ಮಾರಾಟ ಮಾಡದ ಒಂದು ಸಮಾಜವನ್ನು ಕಟ್ಟಿ ಬೆಳೆಸಿದ್ದಷ್ಟೇ ಅಲ್ಲ, ಅಂಥ ಒಂದು ವಾತಾವರಣವನ್ನು ಅಪಾರವಾಗಿ ಪ್ರೀತಿಸುವ ಸಮುದಾಯವನ್ನೂ ಕಟ್ಟಿದ್ದರು. ನಿಜವಾಗಿ ಮದ್ಯಪಾನ ಎಂಬ ಸಂಸ್ಕೃತಿಯು ಒಂದು ಕಡೆ ಅಮಲನ್ನು ಉಂಟುಮಾಡುವಂತೆಯೇ ಇನ್ನೊಂದು ಕಡೆ ಕಾನೂನುಬಾಹಿರ ಕೃತ್ಯಗಳಿಗೂ ಪ್ರೇರಣೆ ನೀಡುತ್ತದೆ. ಮದ್ಯ ಕಂಪೆನಿಗಳು ದುಡ್ಡು ಮಾಡುವಾಗ, ಅದಕ್ಕಾಗಿ ದುಡ್ಡು ವ್ಯಯಿಸುವ ಮಂದಿ ಮದ್ಯಪಾನಿಗಳಾಗಿ ಕಾನೂನು ಬಾಹಿರ ರೀತಿಯಲ್ಲಿ ದುಡ್ಡು ಸಂಗ್ರಹಕ್ಕಿಳಿಯುವುದಕ್ಕೆ ಅವಕಾಶ ಇದೆ. ಮದ್ಯಪಾನಿ ಭ್ರಷ್ಟಾಚಾರಿಯೂ ಆಗಬಲ್ಲ, ಯಾಕೆಂದರೆ ಮದ್ಯವು ಚಹಾದಂತೆಯೋ ಕಾಫಿಯಂತೆಯೋ ಅಲ್ಲ. ಚಹಾವನ್ನು ಪ್ರತಿನಿತ್ಯ ಸೇವಿಸುವವನೇ ಅದನ್ನು ಚಟವಾಗಿ ಹತ್ತಿಸಿಕೊಳ್ಳುವುದಕ್ಕೆ ಅವಕಾಶ ಇರುವಾಗ ಚಟವೇ ಆಗುವ ಮದ್ಯವು ವ್ಯಕ್ತಿಯ ಮೇಲೆ ಬೀರಬಹುದಾದ ಪರಿಣಾಮಗಳು ಯಾವ ರೀತಿಯದ್ದಾಗಿರಬಹುದು? ಆರಂಭದಲ್ಲಿ ಫ್ಯಾಶನ್‌ಗಾಗಿ ಕುಡಿದರೂ ಕ್ರಮೇಣ ಮದ್ಯವೇ ವ್ಯಕ್ತಿಯನ್ನು ಕುಡುಕನನ್ನಾಗಿಸುತ್ತದೆ. ಮದ್ಯದ ಸಿಪ್ ಇಲ್ಲದೇ ದಿನ ಕಳೆಯಲು ಅಸಾಧ್ಯವೆನಿಸುವ ಸಂದರ್ಭಗಳು ಎದುರಾಗುತ್ತವೆ. ಮದ್ಯವರ್ಜನ ಕೇಂದ್ರಗಳಲ್ಲಿ ಮದ್ಯ ಚಟದಿಂದ ಹೊರಬರಲು ಪಾಡು ಪಡುತ್ತಿರುವ ಮದ್ಯ ಪಾನಿಗಳೇ ಇದಕ್ಕೆ ಅತ್ಯುತ್ತಮ ಉದಾಹರಣೆ. ಆರಂಭದಲ್ಲಿ ಮದ್ಯದ ಬಾಟಲಿಗಳು ಬರೀ ಬಾಟಲಿಗಳು ಮಾತ್ರ. ಆದರೆ ಬರಬರುತ್ತಾ ಅವು ವಿಷವೂ ಹೌದು ಕೊಲೆಗಾರನೂ ಹೌದು.

## ಮದ್ಯಪಾನದ ದುಷ್ಪರಿಣಾಮಗಳು

ಪ್ರವಾದಿ ಮುಹಮ್ಮದ್(ಸ) ಅವರು ಮದ್ಯವನ್ನು ಎಲ್ಲ ಕೆಡುಕುಗಳ ತಾಯಿ ಎಂದು ಕರೆದಿದ್ದಾರೆ. ಮದ್ಯಪಾನವನ್ನು ಚಟವಾಗಿ ಅಂಟಿಸಿಕೊಂಡವರು ಇವತ್ತು ವಿವಿಧ ಆಸ್ಪತ್ರೆಗಳಲ್ಲಿ

ಪಡುತ್ತಿರುವ ಪಾಡು ಮತ್ತು ಪ್ರತಿದಿನ ಸೇವಿಸುತ್ತಿರುವ ಔಷಧಿಗಳನ್ನು ಪರಿಗಣಿಸಿದರೆ ಪ್ರವಾದಿಯವರ(ಸ) ಈ ಮಾತಿನ ಮರ್ಮ ಅರ್ಥವಾಗುತ್ತದೆ. ಅಮಲು ಕೊಡುವ ಮದ್ಯ ಅಮಲು ಬಿರಿದ ಬಳಿಕ ರೋಗವನ್ನೂ ನೋವನ್ನೂ ಕೊಡುತ್ತದೆ. ಆ ನೋವನ್ನು ಮರೆಯಲು ಮತ್ತೆ ಮತ್ತೆ ಕುಡಿಯ ಬೇಕಾಗುತ್ತದೆ. ಕುಡಿತವನ್ನು ಅಭ್ಯಾಸ ಮಾಡಿಕೊಂಡವ ಸಮಸ್ಯೆಗಳನ್ನು ಎದುರಿಸುವ ಸಾಮರ್ಥ್ಯವನ್ನು ನಿಧಾನವಾಗಿ ಕಳಕೊಳ್ಳತೊಡಗುತ್ತಾನೆ. ಸಮಸ್ಯೆಗೆ ಮುಖಾಮುಖಿಯಾಗುವ ಬದಲು ಸಮಸ್ಯೆಯಿಂದ ಪಲಾಯನಗೊಳ್ಳಲು ಮುಂದಾಗುತ್ತಾನೆ. ತನ್ನೊಳಗಿನ ಗೊಂದಲ, ಭಯವನ್ನು ಮರೆಸಿಕೊಳ್ಳಲು ಕುಡಿತದ ಮೊರೆಹೋಗುತ್ತಾನೆ. ಕುಡಿತವನ್ನು ಅಭ್ಯಾಸ ಮಾಡಿಕೊಂಡ ವ್ಯಕ್ತಿಗೂ ಕುಡಿಯದ ವ್ಯಕ್ತಿಗೂ ನಡುವೆ 10-12 ವರ್ಷಗಳ ವರೆಗೆ ಆಯುಷ್ಯಗಳ ವ್ಯತ್ಯಾಸವಿದೆ ಎಂದು ವೈದ್ಯಕೀಯ ವರದಿಗಳು ಹೇಳುತ್ತವೆ. ಅಂದರೆ ಕುಡಿತವು ವ್ಯಕ್ತಿಯ ಆಯುಷ್ಯವನ್ನು 10-12 ವರ್ಷಗಳಷ್ಟು ಕಡಿಮೆಗೊಳಿಸುತ್ತದೆ ಎಂದು ವರದಿಗಳೇ ಹೇಳುತ್ತವೆ. ಕುಡಿದ ವ್ಯಕ್ತಿಯಲ್ಲಿ ಸಿಟ್ಟು ಮತ್ತು ಆಕ್ರೋಶವು ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಸಹನೆಯಿಂದ ಆಲೋಚಿಸುವ ಮತ್ತು ಸ್ಪಂದಿಸುವ ಗುಣಗಳ ಬದಲಾಗಿ ತಕ್ಷಣದ ಪ್ರತಿಕ್ರಿಯೆಯೇ ಹೆಚ್ಚಿರುತ್ತದೆ. ಇವಲ್ಲದೇ

1) ಮದ್ಯಪಾನದಿಂದಾಗಿ ನಿದ್ದೆ ಬಾರದೇ ಇರುವ ಸಮಸ್ಯೆ ತಲೆದೋರುತ್ತದಲ್ಲದೇ ಲೈಂಗಿಕ ಅಸಾಮರ್ಥ್ಯದ ತೊಂದರೆಯೂ ಎದುರಾಗುತ್ತದೆ.

2) ಮೇದೋಜೀರಕ ಗ್ರಂಥಿ, ಚರ್ಮ ಮತ್ತು ಜೀವಸತ್ವಗಳ ಮೇಲೆ ಮದ್ಯಪಾನ ಪ್ರಭಾವ ಬೀರಿ ತೊಂದರೆ ಉಂಟು ಮಾಡುತ್ತದೆ. ಚರ್ಮದ ಸೋಂಕುಗಳು ಪ್ರಾರಂಭವಾಗುತ್ತದೆ. ಚರ್ಮದ ಕಾಂತಿ ಕಡಿಮೆಯಾಗುತ್ತದೆ.

3) ಶ್ವಾಸಕೋಶಗಳಿಗೆ ಧಕ್ಕೆ ಉಂಟು ಮಾಡಿ ಕ್ಷಯ ರೋಗದಂಥ ಹಲವು ಅಂಟು ಜಾಡ್ಯಗಳಿಗೆ ಮದ್ಯಪಾನ ಕಾರಣವಾಗುತ್ತದೆ.

4) ಶರೀರದ ರೋಗ ನಿರೋಧಕ ಶಕ್ತಿ ಕುಂಠಿತಗೊಳ್ಳುತ್ತದೆ. ಆದರಿಂದಾಗಿ ಈಗಾಗಲೇ ಇರುವಂಥ ರೋಗಗಳು ಉಲ್ಬಣಗೊಳ್ಳುತ್ತವೆ. ಹೊಸ ರೋಗಗಳೂ ಕಾಣಿಸಿಕೊಳ್ಳುತ್ತವೆ.

5) ಸ್ಥೂಲಕಾಯ, ಹೈಪೊಗ್ಲೈಸಿಮಿಯ, ಗೌಟ್, ಬೆರಿಬೆರಿ, ರಕ್ತಹೀನತೆ ಮೊದಲಾದ ಸಮಸ್ಯೆಗಳು ಎದುರಾಗುತ್ತವೆ.

6) ಮನೆಯ ಮತ್ತು ಹೊರಗಿನ ಜವಾಬ್ದಾರಿ ನಿರ್ವಹಣೆಯಲ್ಲಿ ವೈಫಲ್ಯ ಉಂಟಾಗುತ್ತದೆ.

7) ಖಿನ್ನತೆ ಮತ್ತು ನೆನಪಿನ ಶಕ್ತಿಯಲ್ಲಿ ಕೊರತೆಯ ಸಮಸ್ಯೆ ಕಾಡುತ್ತದೆ. ಹೆಚ್ಚಿನ ಮದ್ಯಪಾನಿಗಳ ಸಾವಿಗೆ ಲಿವರ್‌ನ ಸಮಸ್ಯೆ ಪ್ರಮುಖ ಕಾರಣವಾಗಿರುತ್ತದೆ.

8) ಮದ್ಯಪಾನಿಗಳಲ್ಲಿ ಲಿವರ್ ಕ್ಯಾನ್ಸರ್‌ನ ಸಂಭಾವ್ಯತೆ ಅತ್ಯಂತ ಹೆಚ್ಚು.

9) ಮಹಿಳೆಯರ ಮಟ್ಟಿಗೆ ಹೇಳುವುದಾದರೆ ಪ್ರಸವ ಸಂದರ್ಭದಲ್ಲಿ ಸಮಸ್ಯೆಗಳು ಎದುರಾಗುತ್ತವೆ. ಮುಖ್ಯವಾಗಿ ಕಡಿಮೆ ತೂಕ ಮತ್ತು ಅದನ್ನನುಸರಿಸಿ ಗರ್ಭಪಾತದ ಸಂದರ್ಭಗಳೂ ಸೃಷ್ಟಿಯಾಗುತ್ತವೆ.

10) ಮಹಿಳೆಯರಲ್ಲಿ ಸ್ತನಕ್ಯಾನ್ಸರ್, ಹುಟ್ಟುವ ಮಗು ಬುದ್ಧಿಮಾಂದ್ಯ ಆಗುವ ಸಾಧ್ಯತೆ ಹೆಚ್ಚಿರುತ್ತದೆ.

11) ಮದ್ಯಪಾನಿಯು ಬಿದ್ದೋ ಅಪಘಾತ ಸಂಭವಿಸಿಯೋ ಗಾಯಗೊಳ್ಳುವ ಅಥವಾ ಸಾವಿಗೀಡಾಗುವ ಸಂದರ್ಭಗಳು ಬರುತ್ತವೆ.

12) ಪಕ್ಷವಾತ, ಲಿವರ್ ಊದಿಕೊಳ್ಳುವುದು, ಗ್ಯಾಸ್ಟ್ರಿಕ್, ಡಯರಿಯಾ, ಮೂಡ್ ಇಲ್ಲದಿರುವುದು, ಸಾಮಾಜಿಕ ಗೌರವ ಕಳಕೊಳ್ಳುವುದು ಮುಂತಾದುವು ಎದುರಾಗುತ್ತದೆ.

13) ಮಹಿಳೆಯರಲ್ಲಿ ಫಲವತ್ತತೆಯ ಮೇಲೆ ಅಡ್ಡ ಪರಿಣಾಮ ಬೀರುತ್ತದೆ.

14) ಮದ್ಯಪಾನವು ಮಹಿಳೆಯರ ಆಯುಷ್ಯದಲ್ಲಿ 15 ವರ್ಷಗಳಷ್ಟನ್ನು ಕಡಿತಗೊಳಿಸುತ್ತದೆ.

15) ಗೃಹ ಹಿಂಸೆಯಲ್ಲಿ ತೊಡಗುವುದಕ್ಕೆ ಮತ್ತು ಅದರಿಂದಾಗಿ ಉಂಟಾಗುವ ದೈಹಿಕ, ಮಾನಸಿಕ ರೋಗಗಳಿಗೆ ಕಾರಣವಾಗುತ್ತದೆ.

16) ಅತಿಯಾದ ಕುಡಿತವು ಸಾವಿಗೆ ಕಾರಣವಾಗುತ್ತದಲ್ಲದೇ ಲಿವರ್, ಮೆದುಳುಗಳ ಸಹಿತ ವಿವಿಧ ಅಂಗಗಳನ್ನು ಅದು ಘಾಸಿಗೊಳಿಸಬಹುದು.

17) ಮದ್ಯಪಾನವು ಚಟವಾಗಿ ಬದಲಾದರೆ ಅದು ದುಡಿದ ಹಣಕ್ಕಿಂತಲೂ ಅಧಿಕ ಖರ್ಚನ್ನು ಬಯಸುತ್ತದೆ. ಕೆಲವೊಮ್ಮೆ ದುಡ್ಡು ಸಾಲದೆ ಮನೆಯನ್ನು ಸ್ಮಶಾನಗೊಳಿಸುವ ಸಂದರ್ಭಗಳು ಬರಬಹುದು.

18) ಅತ್ಯಾಚಾರ, ಕಳ್ಳತನ, ನಿಂದನೆ, ಕೊಲೆ ಮುಂತಾದ ಅಪಾಯಕಾರಿ ಕೃತ್ಯಗಳನ್ನು ಕುಡಿತವು ತೀರಾ ಸುಲಭಗೊಳಿಸುತ್ತದೆ. ಮಾತ್ರವಲ್ಲ, ಅದು ಆ ಬಳಿಕ ಕುಡಿದ ವ್ಯಕ್ತಿಯ ಮನೆಯವರನ್ನಷ್ಟೇ ಅಲ್ಲ ಅವರ ಸಂಬಂಧಿಕರು, ಗೆಳೆಯರು, ನೆರೆಕರೆಯವರು ಮುಂತಾದ ಎಲ್ಲರ ಮುಂದೆಯೂ ಅವಮಾನಿತನಾಗಿಸಿ ಬಿಡುತ್ತದೆ.

19) ಮದ್ಯಪಾನವು ತೀವ್ರ ರೀತಿಯ ಮಾನಸಿಕ ಒತ್ತಡ ಮತ್ತು ಡಿಪ್ರೆಶ್ಶನ್‌ಗೆ ಒಳಪಡಿಸುತ್ತದೆ.

## ಮನೆ ಮತ್ತು ಸಮಾಜದ ಮೇಲೆ ಪ್ರಭಾವ

ಕುಡಿತವು ಓರ್ವ ವ್ಯಕ್ತಿಯ ಸಹಜ ಬಯಕೆಯಲ್ಲ, ಅದು ಪ್ರಕೃತಿಯ ಬೇಡಿಕೆಯೂ ಅಲ್ಲ, ಅದು ಮನುಷ್ಯರೇ ತಮ್ಮ ಸ್ವೇಚ್ಛೆಗೆ ತಯಾರಿಸಿಕೊಂಡ ಪೇಯ. ಆದ್ದರಿಂದಲೇ ಅದು ಸರ್ವ ಕೆಡುಕುಗಳ ಮಾತೆಯಾಗಿ ಸಮಾಜವನ್ನು ಕಾಡುತ್ತಿದೆ. ಕುಡುಕನಿಗೆ ಮತ್ತಿನ ಸಂದರ್ಭದಲ್ಲಿ ತಾನು ಏನು ಹೇಳುತ್ತಿದ್ದೇನೆ ಎಂಬುದೇ ಗೊತ್ತಿರುವುದಿಲ್ಲ. ಆದರೆ ಗೊತ್ತಿಲ್ಲದ ಸಂದರ್ಭದಲ್ಲಿ ಆತ ಏನು ಹೇಳಿದ್ದನೋ/ಳೋ ಅದು ಆತನ ಜೊತೆಗಿರುವವರಿಗೆ ಅಥವಾ ಆತನನ್ನು ಮುಖಾಮುಖಿಯಾದವರಿಗೆ ಗೊತ್ತಿರುತ್ತದೆ. ಮಾತ್ರವಲ್ಲ, ಆ ಮಾತುಗಳು ಅವರನ್ನು ಒಂದೋ ಸಿಟ್ಟಿಗೆ ಅಥವಾ ಅಸಹನೆಗೆ ಒಳಪಡಿಸಿರುತ್ತದೆ. ನಾಲ್ಕು ಮಂದಿಯ ಮುಂದೆ, ಸಾರ್ವಜನಿಕವಾಗಿ

ತನ್ನನ್ನು ಅವಮಾನಿಸುವ, ಘನತೆಗೆ ಕುಂದುಂಟು ಮಾಡುವ ಮಾತುಗಳನ್ನಾಡಿದ ಆತನ ಬಗ್ಗೆ ಸಹಜವಾಗಿ ಅಸಂತೋಷ ವ್ಯಕ್ತವಾಗುತ್ತದೆ. ಇದು ಘಟನೆಯ ಒಂದು ಮಗ್ಗುಲಾದರೆ ಇನ್ನೊಂದು ಕುಡಿತದ ಮತ್ತಿನಲ್ಲಿ ಆತ/ಕೆ ಆಡಿದ ಮಾತುಗಳು ಸಾರ್ವಜನಿಕರಲ್ಲಿ ಆತನ ಗೌರವವನ್ನು ಕುಂದಿಸುತ್ತದೆ. ಹೀಗೆ, ಕುಡಿಯುವುದು ನೆಮ್ಮದಿ ಕಂಡುಕೊಳ್ಳುವುದಕ್ಕೆ. ಆದರೂ ಕುಡಿದ ಬಳಿಕ ಆತ/ಕೆ ಸಾರ್ವಜನಿಕರ ನೆಮ್ಮದಿ ಕದಡುವುದಷ್ಟೇ ಅಲ್ಲ, ತನ್ನ ನೆಮ್ಮದಿಯನ್ನೂ ಹಾಳುಮಾಡಬಲ್ಲ ಇನ್ನಷ್ಟು ಸಂದರ್ಭಗಳನ್ನು ಸೃಷ್ಟಿಸಿರುತ್ತಾನೆ. ನಿಜವಾಗಿ ಕುಡಿತವು ಸಾಮಾನ್ಯವಾಗಿ ಮನೆಯಲ್ಲಿಯೋ ಪತ್ನಿ-ಮಕ್ಕಳೊಂದಿಗೋ ಕಳೆಯಬೇಕಾದ ಸಮಯದಲ್ಲೇ ಆಗಿರುತ್ತದೆ. ಕಛೇರಿ ಅಥವಾ ಉದ್ಯೋಗದ ವೇಳೆ ಕುಡಿಯುವುದರಿಂದ ಕೆಲಸ ತಪ್ಪುವ ಭೀತಿಯಿರುತ್ತದೆ. ಆದ್ದರಿಂದ ಕೆಲಸದ ನಂತರದ ಸಮಯವನ್ನು ಹೆಚ್ಚಿನವರು ಕುಡಿತಕ್ಕೆ ಮೀಸಲಿಡುತ್ತಾರೆ. ಹೀಗೆ ಪತ್ನಿ-ಮಕ್ಕಳೊಂದಿಗೆ ಕಳೆಯಬೇಕಾದ ರಮ್ಯ ಸಂದರ್ಭವನ್ನು ಕುಡಿತವು ಹಾಳುಗೆಡವಿ ಬಿಡುತ್ತದೆ. ಒಂದು ವೇಳೆ ಕುಡಿದು ಮನೆಗೆ ತಲುಪಿದರೂ ಪತ್ನಿ-ಮಕ್ಕಳೊಂದಿಗೆ ಆತ ಸಹಜವಾಗಿ ವರ್ತಿಸಲಾರ. ಕುಡಿತವಿಲ್ಲದ ದಿನಗಳಲ್ಲಿ ಪತ್ನಿ-ಮಕ್ಕಳೊಂದಿಗೆ ಹೇಗೆ ವರ್ತಿಸುತ್ತಿದ್ದನೋ ಆ ರೀತಿಯಲ್ಲಿ ವರ್ತಿಸುವುದಕ್ಕೆ ಮದ್ಯವು ಅಡ್ಡ ಬರುತ್ತದೆ. ನೆಮ್ಮದಿಯನ್ನು ಪಡಕೊಳ್ಳುವುದಕ್ಕಾಗಿ ಕುಡಿಯುವ ವ್ಯಕ್ತಿಯು ಮನೆಯಲ್ಲಿ ಎಷ್ಟು ಸದಸ್ಯರಿದ್ದಾರೋ ಅವರೆಲ್ಲರ ನೆಮ್ಮದಿಯನ್ನು ಹಾಳು ಮಾಡುತ್ತಾನೆ. ಮಾತ್ರವಲ್ಲ, ಆತ ಮತ್ತು ಇಳಿದ ಬಳಿಕ ಸಾಮಾನ್ಯ ಸ್ಥಿತಿಯನ್ನು ಕಾಯ್ದುಕೊಳ್ಳಲು ಯತ್ನಿಸಿದರೂ ವಿನಾಕಾರಣ ನೆಮ್ಮದಿ ಕೆಡಿಸಿದ ತಂದೆ ಅಥವಾ ಪತಿಯ ಮೇಲೆ ಮಕ್ಕಳು ಇಲ್ಲವೇ ಪತ್ನಿ ಸಿಟ್ಟಾಗಿರುತ್ತಾರೆ. ಆ ದಿನವು ನೆಮ್ಮದಿ ರಹಿತವಾಗಿ ಕಳೆದು ಹೋಗುತ್ತದೆ. ಅಲ್ಲದೇ ಕುಡಿದ ವ್ಯಕ್ತಿ ಮತ್ತೆ ಮೊದಲಿನಂತಾಗಲು ಅಥವಾ ಅಮಲು ಬಿರಿಯಲು ಕೆಲವು ಗಂಟೆಗಳಷ್ಟು ಸಮಯವನ್ನು ತೆಗೆದುಕೊಳ್ಳುತ್ತಾನೆ. ಯಾವುದಾದರೂ ರಚನಾತ್ಮಕ ಕೆಲಸ-ಕಾರ್ಯಗಳಲ್ಲಿ ವಿನಿಯೋಗಿಸಬಹುದಾಗಿದ್ದ ಆ ಸಮಯವು ಹೀಗೆ ಅಮಲು ಮತ್ತು ನಿದ್ದೆಯಲ್ಲಿ ಕಳೆದು ಹೋಗುತ್ತದೆ. ಎಷ್ಟೋ ಮನೆಗಳಲ್ಲಿ ಪತಿಯ ಮದ್ಯ ಚಟದಿಂದಾಗಿ ಮನೆ ನಿರ್ವಹಣೆ ಸಾಧ್ಯವಾಗದೇ ಉದ್ಯೋಗಕ್ಕಾಗಿ ಪತ್ನಿಯೂ ಹೋಗಬೇಕಾದ ಅನಿವಾರ್ಯತೆಗಳು ಎದುರಾಗಿವೆ.

## ಕಾರ್ಮಿಕ ಸಮಸ್ಯೆ, ಅಬಕಾರಿ ಆದಾಯ ಎಂಬ ಸವಾಲು

ಅಂದಹಾಗೆ, ಮದ್ಯ ನಿಷೇಧದ ಒತ್ತಾಯ ಎದುರಾದಾಗಲೆಲ್ಲ ಸರಕಾರವು ಕಾರ್ಮಿಕರ ಬಗ್ಗೆ ಮತ್ತು ಅಬಕಾರಿ ಆದಾಯದ ಬಗ್ಗೆ ಚರ್ಚೆಗಳನ್ನು ಹುಟ್ಟು ಹಾಕುತ್ತದೆ. ಮದ್ಯ ನಿಷೇಧದಿಂದಾಗಿ ದೊಡ್ಡದೊಂದು ನಿರುದ್ಯೋಗ ಸಮಸ್ಯೆ ಹುಟ್ಟಿಕೊಳ್ಳುತ್ತದೆ ಎಂಬ ಸುದ್ದಿಯನ್ನು ಹಬ್ಬಿಸಿ ಬಿಡಲಾಗುತ್ತದೆ. ಅಬಕಾರಿ ವರಮಾನ ಇಲ್ಲದೇ ಸರಕಾರ ನಡೆಸುವ ಹಾಗಿಲ್ಲ ಎಂಬ ಮಾತು ಜೋರಾಗಿಯೇ ಇದೆ. ಅಷ್ಟಕ್ಕೂ FDI (ವಿದೇಶಿ ನೇರ ಬಂಡವಾಳ ಹೂಡಿಕೆ) ಯನ್ನು ಭಾರತೀಯ ಮಾರುಕಟ್ಟೆಗೆ ಸ್ವಾಗತಿಸಲು ಟೊಂಕಕಟ್ಟಿ ನಿಂತಿರುವುದು ಇದೇ ನಮ್ಮ

ವ್ಯವಸ್ಥೆಯೇ. ವಿದ್ಯುತ್‌ನ ನೆಪದಲ್ಲಿ ಹತ್ತಾರು ಕೃಷಿ, ವ್ಯವಸಾಯ ಭೂಮಿಗಳನ್ನು ಮುಳುಗಿಸುವ ಅಣೆಕಟ್ಟುಗಳನ್ನು ನಿರ್ಮಿಸುವ ಉಮೇದು ಇರುವುದೂ ಈ ವ್ಯವಸ್ಥೆಯಲ್ಲಿಯೇ. ಬಹುರಾಷ್ಟ್ರೀಯ ಕಂಪೆನಿಗಳಿಗಾಗಿ ಸಾವಿರಾರು ಎಕರೆ ಫಲವತ್ತಾದ ಭೂಮಿಯನ್ನು ಎಕರೆಗೆ ಒಂದು ರೂಪಾಯಿಗೋ ಐದು ರೂಪಾಯಿಗೋ ಬಿಟ್ಟು ಕೊಡಲು ಮುಂದಾಗುವುದೂ ಈ ವ್ಯವಸ್ಥೆಯೇ. ಇಂಥ ಸಂದರ್ಭಗಳಲ್ಲೂ ಕಾರ್ಮಿಕ ಮತ್ತು ನಿರ್ವಸಿತ ಸಮಸ್ಯೆ ಇದ್ದೇ ಇದೆ. ಭೂಮಿಯನ್ನು ಹೀಗೆ ಬಹುರಾಷ್ಟ್ರೀಯ ಕಂಪೆನಿಗಳಿಗೆ ಉಂಬಳಿಯಾಗಿ ಕೊಡುವುದರಿಂದ ಸಾವಿರಾರು ಮಂದಿ ನಿರ್ವಸಿತರಾಗುತ್ತಾರೆ. ಅವರು ಫಸಲು ಭೂಮಿಯನ್ನು ಕಳಕೊಳ್ಳುವುದಷ್ಟೇ ಅಲ್ಲ, ಉದ್ಯೋಗವನ್ನೂ ಕಳಕೊಳ್ಳುತ್ತಾರೆ. ಹಳ್ಳಿ ಪ್ರದೇಶದ ತಮ್ಮ ಫಲವತ್ತಾದ ಭೂಮಿಯಿಂದ ಎತ್ತಿ ಹಾಕಲ್ಪಟ್ಟ ಇವರು ನಗರಕ್ಕೋ ಇನ್ನಿತರ ಪ್ರದೇಶಗಳಿಗೋ ಗುಳೆ ಹೊರಡಬೇಕಾಗುತ್ತದೆ. ಸಹಜವಾಗಿ ಅವರನ್ನು ನಿರುದ್ಯೋಗ ಸಮಸ್ಯೆ ಕಾಡುತ್ತದೆ. ಅಲ್ಲದೇ ವಿದೇಶಿ ನೇರ ಬಂಡವಾಳ ಹೂಡಿಕೆಯು (FDI) ನಮ್ಮ ದೇಶದ ಚಿಲ್ಲರೆ ಮಾರುಕಟ್ಟೆಗೆ ಪ್ರವೇಶಿಸುವುದರಿಂದ ಲಕ್ಷಾಂತರ ಸಣ್ಣ ವ್ಯಾಪಾರಿಗಳು ಬೀದಿ ಪಾಲಾಗುತ್ತಾರೆ. ಮದ್ಯಪಾನ ತಯಾರಿಸುವ ಕಂಪೆನಿಗಳು ಮತ್ತು ಅದನ್ನು ಮಾರಾಟ ಮಾಡುವ ಕೆಲಸದಲ್ಲಿ ನಿರತರಾಗಿರುವವರ ಸಂಖ್ಯೆಗೆ ಹೋಲಿಸಿದರೆ ಇದೇನೂ ಸಣ್ಣ ಸಂಖ್ಯೆಯಲ್ಲ. ಅಲ್ಲದೇ ಮದ್ಯವು ಸಹಜವಾಗಿಯೇ ಕೆಡುಕಿನ ಪಟ್ಟಿಯಲ್ಲಿರುವಂಥದ್ದು. ಸಂಭಾವಿತರು ಅದರ ಬಗ್ಗೆ ಆಸಕ್ತಿ ವ್ಯಕ್ತ ಪಡಿಸುವುದೂ ಗುಟ್ಟಾಗಿಯೇ. ನಾನು ಕುಡುಕ ಎಂಬುದು ಸಮಾಜಕ್ಕೆ ಗೊತ್ತಾಗದಿರಲಿ ಎಂಬ ಮುಚ್ಚು ಮರೆಯೊಂದಿಗೆ ಅವರು ಕುಡಿಯುತ್ತಿರುತ್ತಾರೆ. ಮದ್ಯ ತಯಾರಿಕೆ ಮತ್ತು ಮಾರಾಟ ಕ್ಷೇತ್ರದಲ್ಲಿ ಯಾರೆಲ್ಲ ತೊಡಗಿಸಿಕೊಂಡಿದ್ದಾರೋ ಅವರಿಗೆ ಹೋಲಿಸಿದರೆ ಜಮೀನು ಕಳಕೊಳ್ಳುವವರು ಮತ್ತು ಚಿಲ್ಲರೆ ಮಾರುಕಟ್ಟೆಯಲ್ಲಿ ಬೆವರು ಸುರಿಸುವವರು ಖಂಡಿತ ಹೆಚ್ಚು ಕರುಣೆಗೆ ಅರ್ಹರು. ಯಾಕೆಂದರೆ ಇವರು ಯಾವ ಉದ್ಯೋಗವನ್ನು ಮಾಡುತ್ತಾರೋ ಅದು ಕೆಡುಕಿನ ಪಟ್ಟಿಯಲ್ಲಿಲ್ಲ, ಅಮಲು ಉಂಟು ಮಾಡುವುದಿಲ್ಲ, ಇತರರ ಮನೆ ಮುರಿಯುವುದಿಲ್ಲ, ಪತ್ನಿ-ಮಕ್ಕಳನ್ನು ಬೀದಿಪಾಲು ಮಾಡುವುದಿಲ್ಲ, ರೈತ ಗದ್ದೆಯಲ್ಲಿ ಉಳುಮೆ ಮಾಡಿದರೆ ನಗರದಲ್ಲಿರುವ ಮದ್ಯಪಾನಿಗಳ ಹೊಟ್ಟೆ ತುಂಬುತ್ತದೆ. ಹೀಗಿರುತ್ತಾ ನಮ್ಮ ವ್ಯವಸ್ಥೆಯು ಉದ್ಯೋಗ ಖಾತ್ರಿಗೆ ಮೊದಲ ಆದ್ಯತೆ ನೀಡಬೇಕಾಗಿದ್ದುದು ಈ ವರ್ಗಕ್ಕೆ. ಆದರೆ ಈ ವರ್ಗದ ಹಿತಾಸಕ್ತಿಯ ಕುರಿತಂತೆ ಅಸಡ್ಡೆಯಿಂದ ವರ್ತಿಸುವ ವ್ಯವಸ್ಥೆಯು ಮದ್ಯ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವವರ ಕುರಿತಂತೆ ಅಪಾರ ಕಕ್ಕುಲಾತಿಯನ್ನು ತೋರಿಸುತ್ತದೆ. ಈ ಕಕ್ಕುಲಾತಿಗೆ ಆ ಕ್ಷೇತ್ರದಿಂದ ಬರುವ ಆದಾಯ ಕಾರಣವೆಂದಾದರೆ ಆ ಆದಾಯ ಎಷ್ಟು ಮಾನವೀಯ ಮತ್ತು ನೈತಿಕವಾದುದು ಎಂಬ ಬಗ್ಗೆ ವ್ಯವಸ್ಥೆಯೊಂದಿಗೆ ಪ್ರಶ್ನಿಸಬೇಕಾಗಿದೆ. ಯಾವುದೇ ಆದಾಯ ಮೂಲಕ್ಕೂ ನೈತಿಕ-ಅನೈತಿಕ ಎಂಬ ಎರಡು ಮುಖಗಳಿರುತ್ತವೆ. ಸರಕಾರಿ ಅಧಿಕಾರಿಯೊಬ್ಬ ತನ್ನ ಸಂಬಳದಲ್ಲಿ ಮಾತ್ರ ತೃಪ್ತಿ ಪಡುವುದು, ದುಡ್ಡಿಗಾಗಿ ಇನ್ನಿತರ ವಾಮ ಮಾರ್ಗಗಳನ್ನು ಅವಲಂಬಿಸದೇ ಇರುವುದು ನೈತಿಕತೆ. ಆದರೆ ಲಂಚವನ್ನೂ ಉಪ ಆದಾಯವಾಗಿ ಆತ ಆಯ್ಕೆ ಮಾಡಿಕೊಳ್ಳುವುದು

ಅನೈತಿಕತೆ. ಬಹುಶಃ ಈ ವಿಭಜನೆ ಎಲ್ಲ ಕ್ಷೇತ್ರಗಳಲ್ಲೂ ಇದೆ. ಮದಿರೆಯ ಕ್ಷೇತ್ರಕ್ಕೆ ಸಂಬಂಧಿಸಿ ಹೇಳುವುದಾದರೆ ಆ ಆದಾಯವೇ ಅನೈತಿಕತೆ. ಯಾಕೆಂದರೆ ಅದು ವ್ಯಕ್ತಿಯ ಪ್ರಜ್ಞೆಯನ್ನು ತಪ್ಪಿಸಿ ಸುಳ್ಳು ಭ್ರಮೆಯನ್ನು ಹುಟ್ಟಿಸಿ ಮಾಡುವ ದುಡ್ಡಿನ ವ್ಯವಹಾರ. ಮದ್ಯವು ಅಕ್ಕಿ, ಜೋಳ, ಗೋದಿಯಂಥ ವಸ್ತುವಲ್ಲ. ಮದ್ಯವನ್ನು ಓರ್ವ ಸೇವಿಸದೇ ಇರುವುದರಿಂದ ದೈಹಿಕವಾಗಿ ಅಥವಾ ಮಾನಸಿಕವಾಗಿ ಯಾವ ಅಡ್ಡ ಪರಿಣಾಮಗಳೂ ಆಗುವುದಿಲ್ಲ. ಅದನ್ನು ಕುಡಿಯಲೇ ಬೇಕು ಎಂದು ಯಾವ ವೈದ್ಯರೂ ಶಿಫಾರಸು ಮಾಡುವುದಿಲ್ಲ. ಮದ್ಯ ಸೇವಿಸದೇ ಇರುವುದರಿಂದ ನಿನಗೆ ಇಂತಿಂಥ ರೋಗಗಳು ಬಂದಿವೆ ಎಂದು ವೈದ್ಯಕ್ಷೇತ್ರ ಪಟ್ಟಿ ಮಾಡುವುದಿಲ್ಲ. ಆದರೆ ಅಕ್ಕಿ, ಜೋಳ, ಗೋದಿ ಅಥವಾ ಇಂಥ ಧಾನ್ಯಗಳಿಂದ ಮಾಡಲಾದ ಇನ್ನಿತರ ಉತ್ಪನ್ನಗಳನ್ನು ನಿರಂತರ ಸೇವಿಸದೇ ಇದ್ದರೆ ವ್ಯಕ್ತಿಯ ಆರೋಗ್ಯದಲ್ಲಿ ಏರುಪೇರು ಉಂಟಾಗಬಲ್ಲುದು. ಹೊಟ್ಟೆಯನ್ನು ಖಾಲಿ ಬಿಡುವುದರಿಂದ ದೈಹಿಕ ಸಮಸ್ಯೆ ಕಾಡಬಹುದು. ದೇಹದ ವಿವಿಧ ಅಂಗಗಳ ಮೇಲೆ ಅಂಥ ಕ್ರಮವು ಪರಿಣಾಮ ಬೀರಬಹುದು. ಆದ್ದರಿಂದಲೇ ಮದ್ಯಪಾನದ ಮೂಲಕ ಸರಕಾರ ಸಂಗ್ರಹಿಸುವ ಆದಾಯವು ಅನೈತಿಕ ಮೂಲದ್ದಾಗಿದೆ. ಆ ಆದಾಯದಲ್ಲಿ ಅಸಂಖ್ಯ ಮಂದಿಯ ಕಣ್ಣೀರು, ಸಂಕಟ, ಶಾಪ, ಕೋಪ, ಆಕ್ರೋಶಗಳಿವೆ. ಅಸಂಖ್ಯ ಮಂದಿಯ ಮಾನವನ್ನು ಅದು ದಿನನಿತ್ಯ ಹರಾಜು ಮಾಡುತ್ತದೆ. ಹೆಣ್ಣು ಮಕ್ಕಳ ಮಾನವನ್ನು ಕೆಡಿಸುತ್ತದೆ. ಮಕ್ಕಳ ಭವಿಷ್ಯವನ್ನು ಹಾಳು ಮಾಡುತ್ತದೆ. ದಾಂಪತ್ಯ ಸಂಬಂಧವನ್ನು ಮುರಿಯುತ್ತದೆ. ಮನೆಯನ್ನು ನಿತ್ಯ ನರಕವಾಗಿ ಮಾರ್ಪಡಿಸುತ್ತದೆ. ಹೀಗೆ ಹತ್ತು-ಹಲವು ನಕಾರಾತ್ಮಕ ಮುಖಗಳಿರುವ ಪಾನೀಯವೊಂದರ ಮೇಲೆ ವ್ಯವಸ್ಥೆ ತೋರ್ಪಡಿಸುತ್ತಿರುವ ಈ ಮಮಕಾರವನ್ನು ಜನತೆಗೆ ಮಾಡುವ ದ್ರೋಹ ಎಂದಲ್ಲದೇ ಬೇರೆ ಹೇಗೆ ವ್ಯಾಖ್ಯಾನಿಸಬಹುದು? ನಮ್ಮ ವ್ಯವಸ್ಥೆಯು ಮನಸ್ಸು ಮಾಡಿದರೆ ಆದಾಯ ಮೂಲಕ್ಕೆ ಬೇರೆ ಪರ್ಯಾಯ ದಾರಿಯನ್ನು ಖಂಡಿತ ಕಂಡುಕೊಳ್ಳಬಹುದು. ಅಷ್ಟಕ್ಕೂ ಮದ್ಯವು ಕೇವಲ ಆದಾಯವನ್ನಷ್ಟೇ ತಂದುಕೊಡುವುದಲ್ಲವಲ್ಲ. ಡಾ। ರಾಬರ್ಟ್ಸನ್ ಹೇಳುವಂತೆ, ರೋಗಗಳನ್ನೂ ಆ ಮೂಲಕ ಔಷಧಗಳ ಮಾರಾಟ ಮತ್ತು ಆಸ್ಪತ್ರೆಗಳ ಹೆಚ್ಚಳಕ್ಕೂ ಅದು ಕಾರಣವಾಗುತ್ತದೆ. ಇಲ್ಲೆಲ್ಲಾ ಸರಕಾರವು ಪ್ರಜೆಗಳ ಅನುಕೂಲಕ್ಕಾಗಿ ಸಬ್ಸಿಡಿ ದರದಲ್ಲಿ ಔಷಧಿ ಪೂರೈಕೆಯನ್ನೂ ಮಾಡಬೇಕಾಗುತ್ತದೆ. ಸರಕಾರಿ ಆಸ್ಪತ್ರೆಗಳನ್ನು ಮದ್ಯಪಾನಿ ರೋಗಿಗಳ ಆರೋಗ್ಯ ಸುಧಾರಣೆಗಾಗಿ ಮೀಸಲಿಡಬೇಕಾಗುತ್ತದೆ. ವೈದ್ಯರು, ದಾದಿಯರು, ಔಷಧಿಗಳೆಂದು ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡಬೇಕಾಗುತ್ತದೆ. ಒಂದು ಕಡೆ ಮದ್ಯದಿಂದ ಆದಾಯವನ್ನು ಪಡೆಯುವಾಗ ಇನ್ನೊಂದು ಕಡೆ ಅದೇ ಆದಾಯವು ರೋಗ ರುಜಿನಗಳಿಗಾಗಿ ಸೋರಿಯೂ ಹೋಗುತ್ತದೆ. ಇಂತಹ ಸ್ಥಿತಿಯಲ್ಲಿ ಮದ್ಯದ ಆದಾಯದ ಕುರಿತಂತೆ ವ್ಯವಸ್ಥೆಯೊಂದು ಗಂಭೀರವಾಗಿ ಆಲೋಚಿಸಿದರೆ ಅದಕ್ಕೊಂದು ಪರ್ಯಾಯ ಮೂಲವನ್ನು ಕಂಡುಕೊಳ್ಳಲು ಖಂಡಿತ ಸಾಧ್ಯವಿದೆ.

ನಿಜವಾಗಿ ಇಲ್ಲಿ ಕಗ್ಗಂಟಾಗಿರುವುದು ಆದಾಯದ ಸಮಸ್ಯೆಯಲ್ಲ. ಮದ್ಯ ಎಂಬುದು Elite (ಉನ್ನತ) ಗುಂಪುಗಳ ಅನಿವಾರ್ಯ ಬೇಡಿಕೆ. ಸಾಮಾನ್ಯ ಜನರನ್ನು ಸಾಮಾನ್ಯ ಮದ್ಯ

ನಿಷೇಧಿಸಿ ತೆಪ್ಪಗೆ ಕೂರಿಸಬಹುದಾದರೂ ಈ ಉನ್ನತ ಗುಂಪನ್ನು ಎದುರು ಹಾಕಿಕೊಳ್ಳಲು ವ್ಯವಸ್ಥೆ ಅಷ್ಟು ಸುಲಭದಲ್ಲಿ ಧೈರ್ಯ ತೋರುವುದಿಲ್ಲ, ಅಲ್ಲದೇ ಮದ್ಯ ಕಂಪೆನಿಗಳು ರಾಜಕೀಯ ಪಕ್ಷಗಳಿಗೆ ಯಥೇಚ್ಛವಾಗಿ ದೇಣಿಗೆಯನ್ನು ನೀಡುತ್ತವೆ. ಆ ದೇಣಿಗೆಯಿಲ್ಲದೇ ಚುನಾವಣೆಯನ್ನು ಎದುರಿಸಲಾಗದ ಸ್ಥಿತಿ ಈ ದೇಶದ ರಾಜಕೀಯ ಪಕ್ಷಗಳಲ್ಲಿದೆ. ಇದು ಭಾರತದ ಸಮಸ್ಯೆಯಷ್ಟೇ ಅಲ್ಲ, ಜಾಗತಿಕವಾಗಿಯೇ ಹೆಚ್ಚಿನ ಕಡೆ ಇಂಥ ಲಾಬಿ, ಉನ್ನತ ಗುಂಪಿನ ಒತ್ತಡ ಮತ್ತು ಅನಿವಾರ್ಯತೆಗಳಿವೆ. ಅದನ್ನು ಮೀರಿ ಹೋಗಬೇಕಾದರೆ ಸಾಕಷ್ಟು ಸಮಸ್ಯೆಗಳನ್ನು ಎದುರು ಹಾಕಿಕೊಳ್ಳಬೇಕಾಗುತ್ತದೆ. ಇಂಥ ಧೈರ್ಯವನ್ನು ಯಾವುದಾದರೂ ಸರಕಾರ ತೋರಿದರೆ, ಕಾರ್ಪೊರೇಟ್ ಕಂಪೆನಿಗಳು ತಗಾದೆ ಎತ್ತಬಹುದು. ಮದ್ಯ ಇಲ್ಲದ ಭಾರತದಲ್ಲಿ ಹೂಡಿಕೆ ಮಾಡುವುದಕ್ಕೆ ಹಿಂದೇಟು ಹಾಕಬಹುದು. ಪಬ್ ಸಂಸ್ಕೃತಿ, ಡ್ಯಾನ್ಸ್ ಬಾರ್‌ಗಳಿಲ್ಲದ ಭಾರತವನ್ನು ಅದು ಪುರಾತನ ದೇಶ ಎಂದು ಹೀಯಾಳಿಸಬಹುದು. ಅಭಿವೃದ್ಧಿ ಹೊಂದಿದ ಬಲಾಢ್ಯ ರಾಷ್ಟ್ರಗಳ ಮೂಲಕ ಇಂಥ ಕಂಪೆನಿಗಳು ಮತ್ತು ಪ್ರಭಾವಿ ವ್ಯಕ್ತಿಗಳು ಒತ್ತಡ ಹೇರಬಹುದು. ಆದ್ದರಿಂದ ಇಂಥ ಒತ್ತಡ, ಒತ್ತಾಯಗಳನ್ನೆಲ್ಲ ಮೀರಿ ಒಂದು ಸರಕಾರ ಮದ್ಯದ ಕುರಿತಂತೆ ದೃಢ ನಿರ್ಧಾರ ಕೈಕೊಳ್ಳಬೇಕಾಗುತ್ತದೆ. ತನ್ನ ಪ್ರಜೆಗಳ ಕ್ಷೇಮ, ಆರೋಗ್ಯ, ನೆಮ್ಮದಿಯನ್ನು ಮುಂದಿಟ್ಟುಕೊಂಡು ಈ ಎಲ್ಲ ಅಡೆ-ತಡೆಗಳನ್ನು ನಿವಾರಿಸುವ ಧೈರ್ಯವನ್ನು ತೋರಬೇಕಾಗಿದೆ. ಜಾಗತಿಕವಾಗಿ ಇಂಥ ಧೈರ್ಯ ಪ್ರದರ್ಶಿಸಿದ ಬೇರೆ ರಾಷ್ಟ್ರಗಳ ಮಾದರಿಯನ್ನು ಅಧ್ಯಯನಕ್ಕೆ ಒಳಪಡಿಸಿ ಕ್ರಮ ಕೈಕೊಳ್ಳಬಹುದಾಗಿದೆ. ಆ ರಾಷ್ಟ್ರಗಳು ಅಬಕಾರಿ ಆದಾಯಕ್ಕೆ ಬದಲಾಗಿ ಕಂಡುಕೊಂಡ ಆದಾಯ ಮೂಲವನ್ನು ಅಧ್ಯಯನಕ್ಕೆ ಒಳಪಡಿಸಿ ಅಂಥದ್ದೊಂದು ಅಥವಾ ಅದಕ್ಕಿಂತಲೂ ಭಿನ್ನವಾದ ಆದಾಯ ಮೂಲವನ್ನು ಹುಡುಕಿ ತೆಗೆಯಬೇಕಾಗಿದೆ. ನಿಜವಾಗಿ ಇದೇನೂ ಅಸಾಧ್ಯದ ಮಾತಲ್ಲ, ಒಂದು ವ್ಯವಸ್ಥೆ ತಾನು ಜನಪರ ಎಂದು ತೋರಿಸಿಕೊಳ್ಳಬೇಕಾದ ಸವಾಲಿನ ಸಂದರ್ಭ ಇದು. ಈ ಸವಾಲನ್ನು ಸ್ವೀಕರಿಸಬೇಕೋ ಅಥವಾ ಆದಾಯ ಮೂಲವೆಂಬ ಸುಳ್ಳಿನ ಭ್ರಮೆಯನ್ನು ಹರಡಿಬಿಟ್ಟು ಜನರನ್ನು ಮತ್ತಿನಲ್ಲಿ ತೇಲಿಸಬೇಕೋ ಅನ್ನುವುದನ್ನು ಆಡಳಿತಗಾರರು ನಿರ್ಧರಿಸಬೇಕಾಗಿದೆ.

## ಮದ್ಯ ನಿಷೇಧ ಮತ್ತು ಜನರ ಪಾಲುದಾರಿಕೆ

ನಿಜವಾಗಿ, ಮೇಲಿನ ಪರಿಹಾರಕ್ಕಿಂತ ಹೊರತಾದ ಇನ್ನೊಂದು ಆಯ್ಕೆಯೂ ಇದೆ. ಇಲ್ಲಿರುವುದು ಪ್ರಜಾತಂತ್ರ ವ್ಯವಸ್ಥೆ. ಈ ವ್ಯವಸ್ಥೆಯನ್ನು ಆಯ್ಕೆ ಮಾಡುವುದು ಇಲ್ಲಿನ ಜನರೇ ಹೊರತು ಸ್ವಯಂ ರಾಜಕಾರಣಿಗಳಲ್ಲ ಅಥವಾ ಕಾರ್ಪೊರೇಟ್ ಕುಳಗಳಲ್ಲ, ತಾನು ಮತ ಚಲಾಯಿಸಬೇಕಾದರೆ ಮದ್ಯ ರಹಿತ ವ್ಯವಸ್ಥೆಯ ಭರವಸೆ ನೀಡಬೇಕು ಎಂಬ ಶರತ್ತನ್ನು ರಾಜಕೀಯ ಪಕ್ಷಗಳ ಮುಂದೆ ಮತದಾರರು ಇಡುವ ಧೈರ್ಯ ತೋರಬೇಕು. ಯಾವ ಪಕ್ಷ ಸಂಪೂರ್ಣ ಮದ್ಯ ಮುಕ್ತ ಭಾರತದ ಭರವಸೆ ಕೊಡುತ್ತದೋ ಆ ಪಕ್ಷಕ್ಕೆ ಮಾತ್ರ ನಮ್ಮ ಮತ ಎಂಬೊಂದು ಘೋಷಣೆಯನ್ನು ಪಕ್ಷಾತೀತವಾಗಿ ಮತದಾರರು ಹೊರಡಿಸಬೇಕು.

ಆ ಘೋಷಣೆಯಲ್ಲಿ ಎಲ್ಲ ರಾಜಕೀಯ ಪಕ್ಷಗಳೂ ಮದ್ಯ ಮುಕ್ತ ಭಾರತದ ಭರವಸೆಯನ್ನು ತಮ್ಮ ಚುನಾವಣಾ ಪ್ರಣಾಳಿಕೆಯಲ್ಲಿ ಸೇರಿಸುವಷ್ಟು ದೃಢತೆ ಇರಬೇಕು. ಇಂಥ ಒತ್ತಡವೊಂದನ್ನು ರಾಜಕೀಯ ಪಕ್ಷಗಳ ಮೇಲೆ ಹಾಕಲು ಅಸಾಧ್ಯವೇನೂ ಅಲ್ಲ. ಅಷ್ಟಕ್ಕೂ ಇಂಥ ಒಂದು ಒತ್ತಡವು ಯಾವುದಾದರೊಂದು ಧರ್ಮದ್ದೋ ಜಾತಿಯದ್ದೋ ಪಕ್ಷದ್ದೋ ಲಾಭಕ್ಕಾಗಿ ಮಾಡುವುದಲ್ಲವಲ್ಲ. ಪ್ರತಿಯೊಬ್ಬ ನಾಗರಿಕನ ಆರೋಗ್ಯ, ನೆಮ್ಮದಿ, ಉತ್ತಮ ಭವಿಷ್ಯದ ದೃಷ್ಟಿಯೇ ಇದಕ್ಕೆ ಮೂಲ ಕಾರಣ ತಾನೇ. ಇಂಥದ್ದೊಂದು ಪ್ರಜ್ಞೆ ಸಾರ್ವಜನಿಕವಾಗಿ ಬೆಳೆದದ್ದೇ ಆದಲ್ಲಿ ಮದ್ಯದಿಂದಾಗಿ ಈ ದೇಶದ ಗುಡಿಸಲುಗಳಲ್ಲಿ ಆಗುತ್ತಿರುವ ದೌರ್ಜನ್ಯ, ಏಸಿ ಕೋಣೆಯೊಳಗೆ ನಡೆಯುತ್ತಿರುವ ಅನೈತಿಕತೆ, ಪಾರ್ಟಿಗಳ ಹೆಸರಲ್ಲಿ ಹೆಣ್ಣು ಮಕ್ಕಳ ಮೇಲೆ ನಡೆಯುತ್ತಿರುವ ಲೈಂಗಿಕ ದೌರ್ಜನ್ಯ, ಅತ್ಯಾಚಾರ ಮುಂತಾದ ಅನೇಕ ಕೆಡುಕುಗಳಿಗೆ ದೊಡ್ಡದೊಂದು ಬ್ರೇಕ್ ಬೀಳಬಹುದು. ಬಹುಶಃ ಮದ್ಯಪಾನವನ್ನು ನಿಷೇಧಿಸದ ಹೊರತು ಈ ದೇಶದಲ್ಲಿ ಸದ್ಯ ಚಲಾವಣೆಯಲ್ಲಿರುವ ಅತ್ಯಾಚಾರವಾಗಲಿ, ಇನ್ನಿತರ ಲೈಂಗಿಕ, ದೈಹಿಕ ದೌರ್ಜನ್ಯಗಳಾಗಲಿ ನಿಲ್ಲುವ ಸಾಧ್ಯತೆಯಿಲ್ಲ. ಯಾಕೆಂದರೆ ಎಲ್ಲದರ ಹಿಂದೆಯೂ ಮದ್ಯವೇ ಪ್ರಮುಖ ಆರೋಪಿ. ಈ ಆರೋಪಿಯ ವಿರುದ್ಧ ಆರೋಪ ಪಟ್ಟಿಯನ್ನು ಸಲ್ಲಿಸದೇ ಮತ್ತು ಶಿಕ್ಷೆಗೆ ಒಳಪಡಿಸದೇ ಬರೆ ಬಾಹ್ಯ ಆರೋಪಿಯನ್ನು ಕಟಕಟೆಯಲ್ಲಿ ನಿಲ್ಲಿಸುವುದರಿಂದ ನಿರೀಕ್ಷಿತ ಫಲಿತಾಂಶ ಸಿಗಲಾರದು. ನಿಜವಾದ ಆರೋಪಿ ಬಾಟಲಿಗಳಲ್ಲಿ ಅಡಗಿರುತ್ತಾ ಹೊರಗೆ ಕಾಣುವ ಆರೋಪಿಯನ್ನೇ ನಿಜವಾದ ಅಪರಾಧಿಯೆಂದು ಶಿಕ್ಷಿಸಲು ಮುಂದಾಗುವುದರಿಂದ ಅಪರಾಧ ಪ್ರಕರಣಗಳು ತಗ್ಗಲಾರವು.

## ಪರಿಹಾರ ಸೂತ್ರ

ಮದ್ಯದ ಕುರಿತಂತೆ ಇಸ್ಲಾಮ್ ರಿಯಲಿಸಂಗೆ (ವಾಸ್ತವ) ಒತ್ತು ಕೊಟ್ಟಿದೆಯೇ ಹೊರತು ಎಸ್ಕೇಪಿಸಂಗೆ (ಪಲಾಯನ) ಅಲ್ಲ. ಆದ್ದರಿಂದಲೇ ಮದ್ಯಪಾನವನ್ನು ಇಸ್ಲಾಮ್ ಎಷ್ಟು ಪ್ರಬಲವಾಗಿ ನಿಷೇಧಿಸಿದೆಯೆಂದರೆ ಅದರಲ್ಲಿ Flexibilityಯೇ ಇಲ್ಲ. ಅನಿವಾರ್ಯ ಸಂದರ್ಭಗಳಲ್ಲಿ ಅಂದರೆ ಪ್ರಾಣಕಂಟಕವಾಗಿರುವ ಸಂದರ್ಭಗಳಲ್ಲಿ ಧರ್ಮಸಮ್ಮತ ಆಹಾರ ಎಲ್ಲೂ ಸಿಗದಿದ್ದಾಗ ಜೀವವುಳಿಸಲಿಕ್ಕಾಗಿ ಮದ್ಯ ಎಂದಲ್ಲ ನಿಷಿದ್ಧವಿರುವ ಯಾವ ವಸ್ತುವೂ ಸಮ್ಮತವಾಗುವ ಹಾಗೆ ಮದ್ಯವೂ ಸಮ್ಮತವಾಗುತ್ತದೆಯೇ ಹೊರತು ಇನ್ನಿತರ ಎಲ್ಲ ಸಂದರ್ಭಗಳಲ್ಲೂ ಮದ್ಯ ನಿಷಿದ್ಧವೆಂಬುದು ಇಸ್ಲಾಮಿನ ಖಚಿತ ನಿಲುವು. ಔಷಧಿಗಳಲ್ಲಿ ಬಹುತೇಕ ಅತಿಸಣ್ಣ ಪ್ರಮಾಣದಲ್ಲಿ ಮದ್ಯದಂಶ ಇರುತ್ತದೆ. ಔಷಧವನ್ನು ಚಾಕಲೇಟ್‌ನಂತೆ ಬಳಸುವುದಿಲ್ಲವಾದ್ದರಿಂದ ಅದೊಂದು ಅನಿವಾರ್ಯ ಸಂದರ್ಭ. ಆ ಸಂದರ್ಭದಲ್ಲಿ ಔಷಧವನ್ನು ಅದರ ಅಮಲಿನ ಕಾರಣಕ್ಕಾಗಿ ಸೇವಿಸದೆ ಇದ್ದರೆ ಅದು ಪ್ರಾಣಕ್ಕೇ ಎರವಾಗುವ ಅವಕಾಶ ಇರುತ್ತದೆ. ಇಸ್ಲಾಮ್ ಪ್ರಾಣಕ್ಕೆ, ಆರೋಗ್ಯಕ್ಕೆ ಅತೀವ ಮಹತ್ವವನ್ನು ಕೊಡುತ್ತದೆ. ಆರೋಗ್ಯವನ್ನು ರಕ್ಷಿಸಿಕೊಳ್ಳುವುದಕ್ಕೆ ಸಾಧ್ಯವಿರುವ ಸಕಲ ಪ್ರಯತ್ನಗಳನ್ನೂ ನಡೆಸುವುದು ವ್ಯಕ್ತಿಯ ಸ್ವಾತಂತ್ರ್ಯವೂ ಹೌದು. ಅದೇ ವೇಳೆ ಪ್ರಾಣವನ್ನು ಹರಣಗೊಳಿಸುವುದು ಅಥವಾ

ಆಮಲಿನ ನೆಪದಲ್ಲಿ ಔಷಧ ಸೇವಿಸದೇ ಬದುಕು ಕೊನೆಗೊಳಿಸುವುದು ಇಸ್ಲಾಮ್ ಪ್ರತಿಪಾದಿಸುವ ಮಾನವೀಯ ಗುಣಗಳಿಗೆ ವಿರುದ್ಧವಾದುದಾಗಿದೆ. ಪ್ರಾಣವನ್ನು ರಕ್ಷಿಸಿಕೊಳ್ಳುವುದಕ್ಕೆ ಅವಕಾಶಗಳಿದ್ದೂ ಆ ಅವಕಾಶಗಳನ್ನೂ ಬಳಸಿಕೊಳ್ಳದೇ ಸಾವಿಗೀಡಾಗುವುದು ಆತ್ಮಹತ್ಯೆಗೆ ಸಮವಾಗುತ್ತದೆ. ಇಸ್ಲಾಮ್ ಆತ್ಮಹತ್ಯೆಯನ್ನು ನಿಷಿದ್ಧಗೊಳಿಸಿದೆ (ಪವಿತ್ರ ಕುರ್‌ಆನ್, 4:29). ನಿಜವಾಗಿ ಆಹಾರ, ಉಡುಪು, ಆರಾಧನೆ, ಉಪವಾಸ, ಹಜ್ಜ್... ಎಲ್ಲದರಲ್ಲೂ ಸಾಕಷ್ಟು Flexibility ಯನ್ನು ಒದಗಿಸಿರುವ ಮತ್ತು ವ್ಯಕ್ತಿಯ ಸಹಜ ದೌರ್ಬಲ್ಯವನ್ನು ವಿಶಾಲ ಮನಸ್ಸಿನಿಂದ ಕ್ಷಮಿಸುವ ಗುಣ ಇಸ್ಲಾಮಿನದ್ದು. ಭಾರತೀಯ ಆಹಾರ ಪದ್ಧತಿಯಂತೆ ಅರಬ್ ರಾಷ್ಟ್ರಗಳ ಆಹಾರ ಪದ್ಧತಿಯಲ್ಲ, ಕರ್ನಾಟಕದಲ್ಲಿ ಯಾವ ಬಗೆಯ ಆಹಾರವನ್ನು ಸೇವಿಸಲಾಗುತ್ತದೋ ಅದೇ ಬಗೆಯ ಆಹಾರ ಉತ್ತರ ಭಾರತದಲ್ಲಿಲ್ಲ, ದಕ್ಷಿಣ ಕನ್ನಡದಲ್ಲಿರುವ ಆಹಾರ ಕ್ರಮದಂತೆ ಉತ್ತರ ಕರ್ನಾಟಕದಲ್ಲಿಲ್ಲ, ಬೆಳಗಿನ, ಮಧ್ಯಾಹ್ನದ ಅಥವಾ ರಾತ್ರಿಯ ಆಹಾರ ಕ್ರಮಗಳಲ್ಲೂ ಸಾಕಷ್ಟು ವೈವಿಧ್ಯತೆಗಳಿವೆ. ಈ ವೈವಿಧ್ಯತೆಗಳನ್ನು ಇಸ್ಲಾಮ್ ಅತ್ಯಂತ ವಿಶಾಲ ಭಾವದೊಂದಿಗೆ ಗೌರವಿಸುತ್ತದೆ. ಆಯಾ ಪ್ರದೇಶಕ್ಕೆ ಸಂಬಂಧಿಸಿ ಅಲ್ಲಿನ ಭೌಗೋಳಿಕ ವಾತಾವರಣಕ್ಕೆ ಹೊಂದಿಕೊಂಡು ಆಹಾರ ಪದ್ಧತಿಯನ್ನು ಅನುಸರಿಸುವುದಕ್ಕೆ ಅದೆಂದೂ ಅಡ್ಡಿಪಡಿಸಿಲ್ಲ. ಭಾರತದ ಮುಸ್ಲಿಮರ ಆಹಾರ ಕ್ರಮದಂತೆ ಅಮೇರಿಕ, ರಷ್ಯಾ, ವಿಯೆಟ್ನಾಮ್‌ನಲ್ಲಿರುವ ಮುಸ್ಲಿಮರ ಆಹಾರ ಕ್ರಮಗಳಿಲ್ಲ, ಜಗತ್ತಿನ ಎಲ್ಲ ಮುಸ್ಲಿಮರು ಬೆಳಿಗ್ಗೆ ಇಂಥದ್ದೇ ಆಹಾರ ಸೇವಿಸಬೇಕು, ಮಧ್ಯಾಹ್ನ ಈ ರೀತಿಯದ್ದು ಮತ್ತು ರಾತ್ರಿ ಇದೇ ಬಗೆಯದ್ದು ಎಂಬ ತಾಕೀತನ್ನು ಇಸ್ಲಾಮ್ ಮಾಡಿದ್ದೂ ಇಲ್ಲ. ಇಸ್ಲಾಮ್ ಪಟ್ಟಿ ಮಾಡಿರುವ ನಿಷಿದ್ಧ ಆಹಾರಗಳ ಸಂಖ್ಯೆ ಬಹಳ ಸಣ್ಣದು.

''ಶವ, ರಕ್ತ, ಹಂದಿಮಾಂಸ ಮತ್ತು ಅಲ್ಲಾಹನ ಹೊರತು ಇತರರ ನಾಮೋಚ್ಚಾರ ಮಾಡಲ್ಪಟ್ಟ ಪ್ರಾಣಿ. ಆದರೂ ಯಾರಾದರೂ ಹಸಿವೆಯಿಂದ ವಿವಶರಾಗಿ, ಕಾನೂನನ್ನು ಉಲ್ಲಂಘಿಸುವ ಅಪೇಕ್ಷೆ ಇಲ್ಲದೆ ಅತ್ಯಾವಶ್ಯಕತೆಯ ಮೇರೆ ಮೀರದೇ ಆ ವಸ್ತುಗಳಿಂದ ಒಂದಷ್ಟು ಸೇವಿಸಿದರೆ ದೋಷವಿಲ್ಲ'' (ಪವಿತ್ರ ಕುರ್‌ಆನ್, 16: 115)

''ನಿಮಗೆ ಇವು ನಿಷಿದ್ಧಗೊಳಿಸಲ್ಪಟ್ಟಿವೆ- ಶವ, ರಕ್ತ, ಹಂದಿ ಮಾಂಸ, ಅಲ್ಲಾಹನ ಹೊರತು ಇತರರ ಹೆಸರಲ್ಲಿ ದಿಬ್ಬ(ಚೂರಿ ಹಾಕಲ್ಪಟ್ಟ) ಮಾಡಲ್ಪಟ್ಟ ಪ್ರಾಣಿ, ಉಸಿರುಕಟ್ಟಿ ಅಥವಾ ಪೆಟ್ಟುತಾಗಿ ಅಥವಾ ಎತ್ತರದಿಂದ ಬಿದ್ದು ಅಥವಾ ಘರ್ಷಿಸಲ್ಪಟ್ಟ ಅಥವಾ ಕ್ರೂರ ಮೃಗದಿಂದ ಹರಿದು ಹಾಕಲ್ಪಟ್ಟ ಸತ್ತ ಪ್ರಾಣಿ.'' (ಪವಿತ್ರ ಕುರ್‌ಆನ್, 5:3)

ಉಡುಪಿನ ವಿಷಯವೂ ಹಾಗೆಯೇ. ಅರಬರು ಧರಿಸುವ ಉಡುಪಿನ ವಿನ್ಯಾಸ ಅಲ್ಲಿನ ಭೌಗೋಳಿಕ ಪರಿಸ್ಥಿತಿಗೆ ಹೊಂದಿಕೊಂಡು ಎಷ್ಟು ಸಮ್ಮತಾರ್ಹವೋ ಅಷ್ಟೇ ಲುಂಗಿ, ಬನಿಯನ್ನು, ಶರ್ಟುಗಳನ್ನು ಧರಿಸುವ ಕೇರಳೀಯ ಉಡುಪೂ ಸಮ್ಮತಾರ್ಹ. ಮುಸ್ಲಿಮರೆಲ್ಲ ಅರಬರು ಧರಿಸಿದಂಥ ಉಡುಪನ್ನು ಧರಿಸಬೇಕು ಎಂಬ ತಾಕೀತು ಇಸ್ಲಾಮಿನಲ್ಲಿಲ್ಲ, ಮಹಿಳೆಯರು ಮೇಲು ಉಡುಪಾಗಿ ಧರಿಸುವ ಬುರ್ಖಾ ಎಂಬ ವಿನ್ಯಾಸ ಕುರ್‌ಆನಿನದ್ದೋ. ಪ್ರವಾದಿ

ಮುಹಮ್ಮದ್‌ರದ್ದೋ ಅಲ್ಲ, ಜಾಗತಿಕವಾಗಿ ಇವತ್ತು ಬುರ್ಖಾವನ್ನು ಎಲ್ಲ ಕಡೆಯ ಎಲ್ಲ ದೇಶದ ಎಲ್ಲ ಭೌಗೋಳಿಕ ಪರಿಸ್ಥಿತಿಯಲ್ಲೂ ಮಹಿಳೆಯರು ಧರಿಸುತ್ತಿರುವುದು ಅದು ಇಸ್ಲಾಮ್ ವಿನ್ಯಾಸಗೊಳಿಸಿದ ಅಥವಾ ಆದೇಶಿಸಿದ ಬಟ್ಟೆ ಎಂಬ ಕಾರಣಕ್ಕಾಗಿ ಅಲ್ಲ, ಇಸ್ಲಾಮ್ ಪರ್ದಾ ಎಂಬ ಪದವನ್ನು ಮಹಿಳೆಯರಿಗೆ ಉಡುಪು ಎಂದು ಹೇಳಿದೆ.

''ಮತ್ತು ತಮ್ಮ ಶೃಂಗಾರಗಳನ್ನು ತೋರಿಸದಿರಲಿ. ಆದರೆ ಸ್ವಯಂ ಪ್ರಕಟವಾಗುವಂತಹವುಗಳನ್ನು ಹೊರತು ಮತ್ತು ತಮ್ಮ ತಲೆಯ ಮೇಲೆ ತಮ್ಮ ಮೇಲು ಹೊದಿಕೆಯ ಸೆರಗನ್ನು ಹಾಕಿಕೊಂಡಿರಲಿ.'' **(ಪವಿತ್ರ ಕುರ್‌ಆನ್, 24:31)**

''ಪೈಗಂಬರರೇ ತಮ್ಮ ಪತ್ನಿಯರೊಡನೆಯೂ ಪುತ್ರಿಯರೊಡನೆಯೂ ಸತ್ಯವಿಶ್ವಾಸಿನಿಯರೊಡನೆಯೂ ತಮ್ಮ ಮೇಲೆ ತಮ್ಮ ಚಾದರಗಳ ಸೆರಗನ್ನು ಇಳಿಸಿಕೊಳ್ಳಬೇಕೆಂದು ಹೇಳಿಬಿಡಿರಿ.'' **(ಪವಿತ್ರ ಕುರ್‌ಆನ್, 33: 59)**

ಪರ್ದಾ ಎಂದರೆ ಬುರ್ಖಾ ಎಂದು ಅರ್ಥವಲ್ಲ, ಸೌಂದರ್ಯವನ್ನು ಮರೆಮಾಚುವ, ದೇಹವನ್ನು ಮುಚ್ಚುವ ಉಡುಪು ಎಂದಷ್ಟೇ ಅದರರ್ಥ. ಇಸ್ಲಾಮ್ ಹೇಳುವ ಪರ್ದಾ ದೇಶದಿಂದ ದೇಶಕ್ಕೆ, ರಾಜ್ಯದಿಂದ ರಾಜ್ಯಕ್ಕೆ ಅಥವಾ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನ ಆಗಿರಬಹುದು. ಕರ್ನಾಟಕದ ಕರಾವಳಿಯ ಭಾಗದ ಮಹಿಳೆಯರು ತಮ್ಮ ದೇಹವನ್ನು ಮುಚ್ಚುವುದಕ್ಕೆ ಯಾವ ಬಗೆಯ ಉಡುಪನ್ನು ಆರಿಸಿಕೊಳ್ಳುತ್ತಾರೋ ಅದೇ ಬಗೆಯ ಉಡುಪನ್ನು ಆಂಧ್ರದ ಮಹಿಳೆಯರು ಆರಿಸಿಕೊಳ್ಳಬೇಕೆಂದಿಲ್ಲ, ಒಂದು ಕಡೆ ಬುರ್ಖಾವನ್ನು ಪರ್ದಾ ಆಗಿ ಬಳಸುವ ಮಹಿಳೆಯರು ಇರುವಂತೆಯೇ ಇನ್ನೊಂದು ಕಡೆ ಚೂಡಿದಾರವನ್ನೇ ಪರ್ದಾ ಆಗಿ ಬಳಸುವವರಿರಬಹುದು. ಸೀರೆ, ಮತ್ತಿತರ ಸ್ಥಳೀಯ ಉಡುಪುಗಳು ಆಯಾ ಪ್ರದೇಶದ ಮಹಿಳೆಯರ ಪರ್ದಾ ಆಗಬಹುದು. ಅಮೇರಿಕನ್ನರು, ಮ್ಯಾನ್ಮಾರಿನ ಮಹಿಳೆಯರು ಆಸ್ಟ್ರೇಲಿಯಾದವರು ಎಲ್ಲರೂ ಇವತ್ತು ವ್ಯಾಪಕವಾಗಿ ಚಲಾವಣೆಯಲ್ಲಿರುವ ಬುರ್ಖಾವನ್ನೇ ಪರ್ದಾವಾಗಿ ಸ್ವೀಕರಿಸಬೇಕೆಂದು ಇಸ್ಲಾಮ್ ಆದೇಶಿಸಿಯೇ ಇಲ್ಲ, ಇಲ್ಲೆಲ್ಲಾ ಇಸ್ಲಾಮ್ ಅತ್ಯಂತ ವಿಶಾಲತೆಯನ್ನು ಪ್ರದರ್ಶಿಸಿದೆ. ಜನರಿಗೆ ಆಯ್ಕೆಯ ಸ್ವಾತಂತ್ರ್ಯವನ್ನು ನೀಡಿದೆ. ಆದರೆ ಮದ್ಯದ ವಿಷಯದಲ್ಲಿ ಅದೆಂದೂ ಈ Flexibility ಯನ್ನು ತೋರಿಸಿಯೇ ಇಲ್ಲ, ಮದ್ಯವನ್ನು ಹೊಲಸು ಮತ್ತು ಪೈಶಾಚಿಕ ಕೃತ್ಯ ಎಂದು ಪವಿತ್ರ ಕುರ್‌ಆನ್ ಸಾರಿದ್ದಲ್ಲದೇ ಅದು ನಿಮ್ಮೊಳಗೆ ವೈರತ್ವ ಮತ್ತು ದ್ವೇಷವನ್ನುಂಟು ಮಾಡುವ ವಸ್ತು (5:90-92) ಎಂದು ಖಚಿತವಾಗಿ ಹೇಳಿದೆ. ಕುಡುಕರಿಗೆ ಇಸ್ಲಾಮ್ 40 ರಿಂದ 80 ಛಡಿಯೇಟಿನ ಶಿಕ್ಷೆಯನ್ನು ವಿಧಿಸಲು ಆಜ್ಞಾಪಿಸುತ್ತದೆ. ಯಾಕೆ ಹೀಗೆ ಎಂದರೆ ಇಸ್ಲಾಮ್ ಪಲಾಯನವಾದವನ್ನು ಇಷ್ಟಪಡುವುದಿಲ್ಲ, ಕುಡಿಯುವುದು ಸಂಕಟಗಳನ್ನು ಮರೆಯುವುದಕ್ಕೆ, ಒತ್ತಡವನ್ನು ನಿವಾರಿಸಿಕೊಳ್ಳುವುದಕ್ಕೆ ಮತ್ತು ಮೋಜಿಗೆ. ಇವಲ್ಲದೇ ನೀರಿನಂತೆಯೋ ಚಹಾದಂತೆಯೋ ಅದು ಬಳಕೆಗೀಡಾಗುತ್ತಿಲ್ಲ, ಅದೊಂದು ರೀತಿಯಲ್ಲಿ ಒತ್ತಡ, ಸಂಕಟಗಳಿಂದ ತಾತ್ಕಾಲಿಕವಾಗಿ ಮಾಡುವ ಪಲಾಯನ. ಇಸ್ಲಾಮ್ ಪಲಾಯನವಾದಕ್ಕಿಂತ ಸಮಸ್ಯೆಯನ್ನು ಎದುರಿಸಿ ನಿಲ್ಲುವ ವಾಸ್ತವವಾದವನ್ನು ಬೆಂಬಲಿಸುತ್ತದೆ.

ಸಮಸ್ಯೆಗೆ ಬೆನ್ನು ಹಾಕುವ ವಿಧಾನಕ್ಕಿಂತ ಸಮಸ್ಯೆಯನ್ನು ಎದುರಿಸುವ ಛಾತಿಯನ್ನು ಜನರಲ್ಲಿ ತುಂಬಲು ಬಯಸುತ್ತದೆ. ಪಲಾಯನಕ್ಕೆ ವಿರುದ್ಧವಾಗಿ ಅದು ಆರಾಧನೆಯನ್ನು ಪರ್ಯಾಯವಾಗಿ ಪ್ರತಿಪಾದಿಸುತ್ತದೆ. ನಿಮ್ಮ ಪ್ರಾರ್ಥನೆ ನಿಮ್ಮಲ್ಲಿ ಶಾಂತಿ, ಸಮಾಧಾನ, ಏಕಾಗ್ರತೆ ಮತ್ತು ಸಹನೆಯನ್ನು ತುಂಬುತ್ತದೆ ಎಂದು ವಿವರಿಸುತ್ತದೆ. ಸಂಕಟವನ್ನು ಮರೆಯುವ ಔಷಧವಾಗಿ ಅದು ಪ್ರಾರ್ಥನೆಯನ್ನು ಮುಂದಿಡುತ್ತದೆ.

**''ಓ ಪೈಗಂಬರರೇ, ನೀವು ಅವರಿಗಾಗಿ ಪ್ರಾರ್ಥಿಸಿರಿ. ಏಕೆಂದರೆ, ನಿಮ್ಮ ಪ್ರಾರ್ಥನೆಯು ಅವರ ಮನಶ್ಶಾಂತಿಗೆ ಕಾರಣವಾಗುವುದು...''** **(ಪವಿತ್ರ ಕುರ್‌ಆನ್, 9:103)**

ಅಲ್ಲದೆ ನಮ್ಮ ಮನೆಯನ್ನು ಅದು ಪರ್ಯಾಯ ಶಾಂತಿಧಾಮವಾಗಿ ಕಟ್ಟಿಕೊಡುತ್ತದೆ. ವ್ಯಕ್ತಿಯ ಪಾಲಿನ ಸಂಕಟವನ್ನು ಮರೆಯುವ ತಾಣವಾಗಿ ಇಸ್ಲಾಮ್ ಮನೆ ಮತ್ತು ಆರಾಧನೆಯನ್ನು ಗುರುತಿಸಿದೆಯೇ ಹೊರತು ಬಾಟಲಿಯಲ್ಲಿ ನೆಮ್ಮದಿಯನ್ನು ಹುಡುಕಿದವರಿಂದಾಗಿ ನರಕವಾಗುವ ತಾಣವಾಗಿ ಅಲ್ಲ. ಆದ್ದರಿಂದಲೇ ಪ್ರವಾದಿ ಮುಹಮ್ಮದ್(ಸ) ಅವರು ಇಶಾ ನಮಾಝ್‌ನ ಬಳಿಕ (ರಾತ್ರಿ ಸುಮಾರು 8:30 ರಿಂದ 9.00 ಗಂಟೆಯ ಒಳಗೆ) ಹೊರಗೆ ಹರಟೆ ಹೊಡೆಯುವುದನ್ನು, ಸುತ್ತಾಡುವುದನ್ನೆಲ್ಲಾ ನಿರುತ್ತೇಜಿಸಿದ್ದಾರೆ. ಇಶಾದ ಬಳಿಕ ಮನೆಯಲ್ಲೇ ಪತ್ನಿ-ಮಕ್ಕಳೊಂದಿಗೆ ಸಮಯವನ್ನು ಕಳೆಯಲು ಮತ್ತು ಆ ಮೂಲಕ ಮನೆಯಲ್ಲಿ ಒಂದು ನೆಮ್ಮದಿಯ ವಾತಾವರಣವನ್ನು ಮೂಡಿಸಲು ಅವರು ಪ್ರೇರೇಪಿಸಿದ್ದಾರೆ. ಪತ್ನಿ-ಮಕ್ಕಳೊಂದಿಗೆ ರಾತ್ರಿ ಸಮಯವನ್ನು ಕಳೆಯುವ ಪುರುಷರಿಗೂ ಬಾಟಲಿಯೊಂದಿಗೆ ಕಳೆಯುವ ಪುರುಷರಿಗೂ ವ್ಯತ್ಯಾಸ ಇದೆ. ಬಾಟಲಿ ಇತರರ ನೆಮ್ಮದಿಯನ್ನು ಪರಿಗಣಿಸುವುದಿಲ್ಲ, ಇತರರ ಬೇಕು-ಬೇಡಗಳ ಬದಲು ತಮ್ಮೊಬ್ಬರ ನೆಮ್ಮದಿಯ (ಅದೂ ನಕಲಿ) ಸುತ್ತವೇ ಮೆದುಳು ತಿರುಗುತ್ತಿರುತ್ತದೆ. ಅಮಲು ಇಳಿದ ಬಳಿಕ ಅಥವಾ ಅಮಲಿನಲ್ಲೇ ಕೆಲವೊಮ್ಮೆ ಪಶ್ಚಾತ್ತಾಪ ಕೆಲವೊಮ್ಮೆ ಜಗಳ, ಬೈಯ್ದಾಟಗಳಿಗೆ ಕಾರಣವಾಗಿ ತನ್ನ ಮತ್ತು ಮನೆಯ ನೆಮ್ಮದಿಯನ್ನು ಹಾಳು ಮಾಡುತ್ತದೆ. ಆದ್ದರಿಂದಲೇ ಪವಿತ್ರ ಕುರ್‌ಆನ್ ನಮಾಝನ್ನು ಮತ್ತು ದೇವಧ್ಯಾನವನ್ನು ಪರ್ಯಾಯ ದಾರಿಯಾಗಿ ತೋರಿಸುತ್ತದೆ.

**''ನಿಶ್ಚಯವಾಗಿಯೂ ನಮಾಝ್ ಅಶ್ಲೀಲ ಹಾಗೂ ದುಷ್ಕೃತ್ಯಗಳಿಂದ ತಡೆಯುತ್ತದೆ ಮತ್ತು ಅಲ್ಲಾಹನ ಧ್ಯಾನ ಇದಕ್ಕಿಂತಲೂ ದೊಡ್ಡದು.''** **(ಪವಿತ್ರ ಕುರ್‌ಆನ್, 29:45)**

## ಮದ್ಯವನ್ನು ಸುತ್ತಿರುವ ಭ್ರಮೆ

ಯಾವುದೇ ಒಂದು ಸಮಸ್ಯೆಗೆ ಅಮಲಿನಲ್ಲಿ ಪರಿಹಾರ ಇರಲು ಸಾಧ್ಯವಿಲ್ಲ. ಯಾವುದೇ ಮೋಜು ಕೂಡ ಅಮಲಿನ ಮೂಲಕ ಆಗುವುದೂ ಇಲ್ಲ. ಯಾಕೆಂದರೆ ಮೋಜು ಎಂಬುದು ಒಂದು ಮಿತಿಯೊಳಗೆ ಮನುಷ್ಯನ ಸಹಜ ದೈಹಿಕ ಬೇಡಿಕೆ. ಖುಷಿಯ, ಸಂತಸದ ಕ್ಷಣಗಳನ್ನು ಮನುಷ್ಯ ಆಗಾಗ ಸೃಷ್ಟಿಸಿಕೊಳ್ಳುತ್ತಲೇ ಇರುತ್ತಾನೆ. ವೀಕೆಂಡ್‌ಗಳನ್ನು ಅಥವಾ ಇನ್ನಿತರ ಸಂದರ್ಭಗಳನ್ನು ಇಂಥ ಕ್ಷಣಗಳಿಗಾಗಿ ಬಳಸಿಕೊಳ್ಳುತ್ತಾನೆ. ನಿಜವಾಗಿ ಈ ಕ್ಷಣಗಳು

ಅಮಲಿನ ಮೂಲಕ ಅನುಭವಿಸುವಂಥದ್ದಲ್ಲ. ಅಮಲಿನ ಸಂದರ್ಭಗಳಲ್ಲಿ ಅವು ಪೂರ್ಣ ಪ್ರಮಾಣದಲ್ಲಿ ದಕ್ಕುವುದಕ್ಕೂ ಸಾಧ್ಯವಿಲ್ಲ. ಯಾಕೆಂದರೆ ಅಮಲು ಮತ್ತು ಖುಷಿ ಇವೆರಡೂ ವಿರೋಧ ಪದಗಳು. ಸಾಮಾನ್ಯವಾಗಿ ಅಮಲನ್ನು ಖುಷಿಯ ಪರ್ಯಾಯ ಎಂದೇ ಬಿಂಬಿಸಲಾಗುತ್ತದೆ. ಖುಷಿಯನ್ನು ಅನುಭವಿಸುವುದಕ್ಕೆ ಅಮಲನ್ನು ಸೇವಿಸಲಾಗುತ್ತದೆ ಎಂದು ವಾದಿಸುವವರೂ ಇದ್ದಾರೆ. ನಿಜವಾಗಿ ಖುಷಿಯು ಪ್ರಜ್ಞಾವಸ್ಥೆಯಲ್ಲಿ ಅನುಭವಕ್ಕೆ ಬರಬೇಕಾಗಿರುವಂಥದ್ದು. ಖುಷಿಯನ್ನು ಬಯಸುವುದು ಪ್ರಜ್ಞಾವಸ್ಥೆ, ಅಪ್ರಜ್ಞಾವಸ್ಥೆಯಲ್ಲ. ಆಸ್ಪತ್ರೆಯ ತುರ್ತು ಚಿಕಿತ್ಸಾ ಕೋಣೆಯಲ್ಲಿ ಅಪ್ರಜ್ಞಾವಸ್ಥೆಯಲ್ಲಿ ಮಲಗಿರುವ ವ್ಯಕ್ತಿಗೆ ಆತನೆದುರು ಎಷ್ಟೇ ವೈವಿಧ್ಯಮಯ ಆಹಾರ-ವಸ್ತುಗಳನ್ನು ಇಟ್ಟರೂ ಆತನಿಗದನ್ನು ಅನುಭವಿಸಲು ಸಾಧ್ಯವಿಲ್ಲ. ಆತನ ಇಷ್ಟದ ಲೇಖಕರ ಕೃತಿಗಳನ್ನು ಎದುರಿಟ್ಟರೂ ಅದನ್ನು ಆತ ಜೀರ್ಣಿಸಲಾರ. ಅಮಲು ವ್ಯಕ್ತಿಯನ್ನು ಈ ಹಂತಕ್ಕೆ ಕೊಂಡೊಯ್ಯುತ್ತದೆ. ಕುಡಿದ ಬಳಿಕ ವ್ಯಕ್ತಿ ತನ್ನ ತನವನ್ನು ಮರೆಯುತ್ತಾನೆ. ಅಪ್ರಜ್ಞಾವಸ್ಥೆಗೆ ತಲುಪುತ್ತಾನೆ. ಆ ಮೂಲಕ ಇಲ್ಲಿಯ ನೂರಾರು ನೂರಾರು ಸುಖ-ಸಂತೋಷಗಳ ಸಂದರ್ಭಗಳಿಂದ ವಂಚಿತಗೊಳ್ಳುತ್ತಾನೆ. ಮಾತ್ರವಲ್ಲ, ಏನನ್ನು, ಎಲ್ಲಿ, ಯಾವಾಗ, ಯಾರ ಮುಂದೆ ಹೇಳಬಾರದಿತ್ತೋ ಅವೆಲ್ಲವನ್ನೂ ಆ ಸಂದರ್ಭದಲ್ಲಿ ಹೇಳಿಬಿಡುತ್ತಾನೆ. ಗೆಳೆಯರೊಂದಿಗೆ ಜಗಳಾಡುತ್ತಾನೆ. ಪತ್ನಿ-ಮಕ್ಕಳ ಮುಂದೆಯೇ ಬೈದಾಡುತ್ತಾನೆ. ಖುಷಿಗಾಗಿ ಬಾಟಲಿಯನ್ನು ಎತ್ತಿಕೊಳ್ಳುವ ವ್ಯಕ್ತಿ ಅಂತಿಮವಾಗಿ ತಲುಪುವುದು ಇಂಥ ಖುಷಿ ರಹಿತ, ನೆಮ್ಮದಿ, ಆಹ್ಲಾದರಹಿತ ಸ್ಥಿತಿಗೆ. ಅಷ್ಟಕ್ಕೂ ಸಮಸ್ಯೆಗೆ ಯಾವುದೇ ಅಮಲು ಪರಿಹಾರವನ್ನು ಕೊಡಲು ಸಾಧ್ಯವಿಲ್ಲ. ಅದೊಂದು ಭಂಡ ಧೈರ್ಯವನ್ನು ಕೊಡಬಹುದಷ್ಟೇ. ಅಮಲಿನ ಸಂದರ್ಭದಲ್ಲಿ ಉಂಟಾಗುವ ಆ ಧೈರ್ಯ ಅನಾಹುತಗಳನ್ನು ಮಾಡಿಬಿಡುವುದೇ ಹೆಚ್ಚು. ತನಗಾಗದವರ ಮೇಲೆ ಏರಿ ಹೋಗುವುದಕ್ಕೆ, ಅವಮಾನಿಸುವುದಕ್ಕೆ ಹಲ್ಲೆ ನಡೆಸುವುದಕ್ಕೆ ... ಹೀಗೆ ಅಮಲು ನಕಾರಾತ್ಮಕ ಪರಿಣಾಮ ಬೀರಬಹುದಾದುದಕ್ಕೆ ಪ್ರಚೋದನೆ ಕೊಡಬಹುದೇ ಹೊರತು ಸಮಸ್ಯೆಗೆ ಸಕಾರಾತ್ಮಕ ಪರಿಹಾರವನ್ನಲ್ಲ. ಅಮಲಿನ ಸಂದರ್ಭದಲ್ಲಿ ವ್ಯಕ್ತಿಯು ಕ್ರಿಯಾಶೀಲತೆಯನ್ನು ಕಳೆದುಕೊಳ್ಳುತ್ತಾನೆ. ಅಮಲು ರಹಿತ ಸಂದರ್ಭದಲ್ಲಿ ಇರುವ ದೈಹಿಕ ಚಟುವಟಿಕೆಯು ಅಮಲಿನ ಸಂದರ್ಭದಲ್ಲಿ ಸಾಧ್ಯವಿಲ್ಲ. ಅಲ್ಲದೇ ಮೆದುಳಿನ ಕೆಲಸ ಕಾರ್ಯಗಳೆಲ್ಲ ನಿಧಾನಗೊಳ್ಳುತ್ತದೆ. ಆಲೋಚನಾ ಶಕ್ತಿಯು ಅಮಲುರಹಿತ ಸಂದರ್ಭದಲ್ಲಿದ್ದಷ್ಟು ತೀವ್ರತೆಯನ್ನು ಹೊಂದಿರುವುದಿಲ್ಲ. ಒಂದು ರೀತಿಯಲ್ಲಿ ಅಮಲು ದೈಹಿಕ ಮತ್ತು ಮಾನಸಿಕವಾಗಿ ವ್ಯಕ್ತಿಯನ್ನು ಇನ್ನಷ್ಟು ದುರ್ಬಲಗೊಳಿಸುತ್ತದೆ. ಸಂಕಟದ ನೆಲೆಯಿಂದ ಇನ್ನಷ್ಟು ಸಂಕಟಕ್ಕೆ ದೂಡುತ್ತದೆ. ಹತಾಶೆಯಿಂದ ಹತಾಶೆಗೆ. ಹೀಗಿರುತ್ತಾ ಸಮಸ್ಯೆಯ ನೆಪದಲ್ಲಿ ಮದ್ಯ ಸೇವಿಸುವುದನ್ನು ಹೇಗೆ ಸಮರ್ಥನೀಯ ಎಂದು ಕರೆಯುವುದು? ಸಮಸ್ಯೆಗೆ ಇನ್ನಷ್ಟು ಸಮಸ್ಯೆಗಳನ್ನು ಸೇರಿಸಲಷ್ಟೇ ಶಕ್ತವಿರುವ ಪಾನೀಯವೊಂದು ಯಾಕೆ ಸಮಸ್ಯೆ ನಿವಾರಕ ಅನ್ನಿಸಿಕೊಳ್ಳುವುದು?

ಎರಡನೆಯದಾಗಿ, ಮದ್ಯವು ಆರೋಗ್ಯದ ಮೇಲೆ ತೀವ್ರ ರೀತಿಯ ಅಡ್ಡ ಪರಿಣಾಮಗಳನ್ನು ಉಂಟು ಮಾಡುತ್ತದೆ. ಇಸ್ಲಾಮ್ ಮದ್ಯದ ಬಗ್ಗೆ Flexibility (ವಿಶಾಲ ಮನಸ್ಥಿತಿ) ತೋರಿಸದೇ ಇರುವುದಕ್ಕೆ ಇನ್ನೊಂದು ಕಾರಣವೂ ಇದುವೇ. ದುಡ್ಡು ಪಾವತಿಸಿ ಅನಾರೋಗ್ಯವನ್ನು ಖರೀದಿಸುವ ಈ ಸಂಸ್ಕೃತಿಯಿಂದ ಮಾನವಕುಲಕ್ಕೆ ಲಾಭವಿಲ್ಲ ಎಂಬುದು ಇಸ್ಲಾಮ್‌ನ ನಿಲುವು. ಮದ್ಯವು ಮನುಷ್ಯನ ಶರೀರ ಮತ್ತು ಮೆದುಳನ್ನು ದುರ್ಬಲಗೊಳಿಸುತ್ತದೆ. ದುರ್ಬಲ ವ್ಯಕ್ತಿಗಿಂತ ಪ್ರಬಲ ವ್ಯಕ್ತಿ ಸೃಷ್ಟಿಕರ್ತನಿಗೆ ಹೆಚ್ಚು ಇಷ್ಟ ಎಂದು ಪ್ರವಾದಿ ಮುಹಮ್ಮದ್(ಸ) ಹೇಳಿದ್ದಾರೆ. ದುರ್ಬಲ ಎಂಬುದಕ್ಕೆ ವಯಸ್ಸಾದ ವ್ಯಕ್ತಿ ಎಂಬ ಸರಳ ವ್ಯಾಖ್ಯಾನವನ್ನಷ್ಟೇ ನೀಡಬೇಕಿಲ್ಲ, ವಯಸ್ಸಿನಿಂದ ದುರ್ಬಲವಾಗುವುದು ಪ್ರಕೃತಿ ಸಹಜವಾದುದು. ಆ ದುರ್ಬಲತೆಯನ್ನು ಕಿರಿಯ ವಯಸ್ಸಿನವರ ಗಟ್ಟಿಮುಟ್ಟಿನೊಂದಿಗೆ ಹೋಲಿಸಿ ನೋಡಲಾಗದು. ಯುವಕರು ಗಟ್ಟಿಮುಟ್ಟಾಗಿರುವುದು ಮತ್ತು ಹಿರಿಯರು ದುರ್ಬಲರಾಗಿರುವುದು ಹೊರನೋಟಕ್ಕೆ ಎಲ್ಲರಿಗೂ ಗೊತ್ತಾಗುವಂಥದ್ದು. ನಿಜವಾಗಿ, ಇಲ್ಲಿ ದುರ್ಬಲ ಎಂದರೆ ವಯಸ್ಸು ಇದ್ದೂ ದೇಹದ ಆರೋಗ್ಯವನ್ನು ಸ್ವಯಂ ಆಗಿ ಕೆಡಿಸಿಕೊಂಡವ. ಅದು ಅಮಲಿನಿಂದ ಮಾತ್ರವೇ ಆಗಬೇಕಿಲ್ಲ, ಶರೀರಕ್ಕೆ ಒಗ್ಗದ ಅನಾರೋಗ್ಯಕ್ಕೆ ಆಹ್ವಾನ ನೀಡುವ ವಿವಿಧ ಬಗೆಯ ಆಹಾರ ಕ್ರಮಗಳೂ ಇರಬಹುದು. ಬಾಯಿ ರುಚಿಯ ಬೆನ್ನು ಬಿದ್ದು ಹೊಟ್ಟೆಯನ್ನು ರೋಗದ ಗುಡಾಣವಾಗಿ ಮಾಡಿಕೊಂಡವರ ಬಗ್ಗೆಯೂ ಈ ವಚನ ಬಂದಿರಬಹುದು. ಬಹುಶಃ ಆರೋಗ್ಯವನ್ನು ಕಾಪಾಡಿಕೊಳ್ಳಬೇಕಾದ ಮಹತ್ತರ ಹೊಣೆಗಾರಿಕೆ ಎಲ್ಲರ ಮೇಲಿದೆ. ಮದ್ಯವಂತೂ ಆರೋಗ್ಯದ ಮೇಲೆ ನೇರವಾಗಿ ಅಡ್ಡಪರಿಣಾಮಗಳನ್ನು ಬೀರುತ್ತದೆ.

ಹಾಗಂತ ಪ್ರತಿ ದವಸ-ಧಾನ್ಯ, ಹಣ್ಣು-ಹಂಪಲು, ತರಕಾರಿಗಳ ಮೇಲೂ ಇವತ್ತು ರಾಸಾಯನಿಕಗಳನ್ನು ಸಿಂಪಡಿಸಲಾಗುತ್ತಿದ್ದು ಅದು ಆರೋಗ್ಯದ ಮೇಲೆ ಅಡ್ಡ ಪರಿಣಾಮ ಬೀರುತ್ತಿಲ್ಲವೇ, ಅವನ್ನೂ ವರ್ಜಿಸಬೇಕೇ ಎಂಬ ಪ್ರಶ್ನೆ ಉದ್ಭವವಾಗಬಹುದು. ಅಕ್ಕಿ-ಗೋದಿ, ತರಕಾರಿಗಳು ಸ್ವಯಂ ಅನಾರೋಗ್ಯಕರ ವಸ್ತುಗಳಲ್ಲ, ಅವುಗಳ ಮೇಲೆ ಸಿಂಪಡಿಸಲಾಗುವ ರಾಸಾಯನಿಕಗಳು ಮದ್ಯದಷ್ಟು ಅಪಾಯಕಾರಿಗಳೂ ಅಲ್ಲ, ಅಲ್ಲದೆ ಈ ಆಹಾರ ವಸ್ತುಗಳು ಜನರು ಬದುಕಿ ಉಳಿಯುವುದಕ್ಕೂ ಅನಿವಾರ್ಯ. ಅದಿಲ್ಲದೇ ಬದುಕು ಮುಂದೆ ಸಾಗದು. ಆದರೆ ಮದ್ಯ ಹಾಗಲ್ಲ, ಅದು ಅನಿವಾರ್ಯವಲ್ಲ, ಅಕ್ಕಿ-ಗೋದಿಯಂತೆ ಮೂರು ಹೊತ್ತು ಹೊಟ್ಟೆ ತುಂಬಿಸುವ ವಸ್ತುವೂ ಅಲ್ಲ, ಬದುಕಿನಲ್ಲಿ ಮೂರೂ ಹೊತ್ತು ಬರೇ ಮದ್ಯವನ್ನು ಸೇವಿಸುತ್ತಾ ಬದುಕುವ ಮಂದಿ ಈ ಸಮಾಜದಲ್ಲಿ ಎಷ್ಟಿರಬಹುದು? ಒಂದು ವೇಳೆ ಮದ್ಯವು ಚಟವಾಗಿ ಹತ್ತಿದ ವ್ಯಕ್ತಿಗಳು ಅಪರೂಪವಾಗಿ ಇದ್ದಿರಬಹುದಾದರೂ ಅವರು ಅದನ್ನು ಹಾಗೆ ಸೇವಿಸುವುದಕ್ಕೆ ಅದು ಹೊಟ್ಟೆ ತುಂಬಿಸುತ್ತದೆ ಎಂದೋ ಅನ್ನ, ರೊಟ್ಟಿಗೆ ಪರ್ಯಾಯ ಎಂದೋ ಆಗಿದ್ದಿರಲಾರದು. ಮದ್ಯ ಅವರನ್ನು ಸಂಪೂರ್ಣ ವಶಪಡಿಸಿಕೊಂಡಿದೆ. ಅದರಿಂದ ಹೊರಬರಲಾಗದ ಅನಿವಾರ್ಯ ಸ್ಥಿತಿಯೊಂದು ಅವರಿಗೆ ಎದುರಾಗಿದೆ.

## ನಮ್ಮೊಳಗಿನ ಚರ್ಚೆ ಮತ್ತು ವಿರೋಧಾಭಾಸ

ಈ ದೇಶದಲ್ಲಿ ಅಪರೂಪಕ್ಕೊಮ್ಮೆ ನಮ್ಮ ಮಾಧ್ಯಮಗಳು ಮತ್ತು ಸಂಘಟನೆಗಳು ಮದ್ಯದ ಸುತ್ತ ಚರ್ಚೆ ನಡೆಸುವುದಿದೆ. ಅದರ ಸಾಧಕ-ಬಾಧಕಗಳ ಸುತ್ತ ವಿಚಾರ-ವಿಮರ್ಶೆ ನಡೆಸುವುದಿದೆ. ಮಾಧ್ಯಮಗಳು ಒಂದೆರಡು ಪುಟಗಳನ್ನು ಅಥವಾ ಒಂದಷ್ಟು ಪ್ರೈಮ್‌ಟೈಮನ್ನು ಮೀಸಲಿಡುವುದೂ ಇದೆ. ಆದರೆ ಅದು ಸಹಜ ಮದ್ಯಪಾನದ ಬಗ್ಗೆಯಲ್ಲ, ನಕಲಿ ಅಥವಾ ಕಳ್ಳಭಟ್ಟಿ ಮದ್ಯದ ಬಗ್ಗೆ. ಎಲ್ಲಾದರೂ ಕಳ್ಳಭಟ್ಟಿ ಸಾರಾಯಿ ಕುಡಿದು ದೊಡ್ಡ ಸಂಖ್ಯೆಯಲ್ಲಿ ಪ್ರಾಣ ಹಾನಿಯಾದರೆ ಪತ್ರಿಕೆಗಳು ಸಂಪಾದಕೀಯ ಬರೆಯುವುದಿದೆ. ದುರಂತ ಏನೆಂದರೆ, ನಕಲಿ ಮದ್ಯವನ್ನು ಕುಡಿದು ಯಾವಾಗಲೋ ಒಮ್ಮೆ ನೂರಾರು ಮಂದಿ ಸಾಯುವಾಗ ಆಗುವ ಚರ್ಚೆ, ಅಸಲಿ ಮದ್ಯ ಕುಡಿದು ದಿನನಿತ್ಯ ಅನೇಕ ಮಂದಿ ಸತ್ತರೂ ಅಪಘಾತ ನಡೆಸಿದರೂ ಆರೋಗ್ಯ ಕೆಡಿಸಿಕೊಂಡರೂ ಹತ್ಯೆ ನಡೆಸಿದರೂ ಆಗುವುದಿಲ್ಲ. ನಿಜವಾಗಿ, ಕಳ್ಳಭಟ್ಟಿಯನ್ನು ನಿಯಂತ್ರಿಸುವುದು ಹೇಗೆ ಎಂಬ ಚರ್ಚೆಯೇ ಅಪ್ರಸ್ತುತ, ಅಸಂಬದ್ಧ. ನಕಲಿ ಮದ್ಯದಿಂದ ಆಗುವ ದೈಹಿಕ-ಸಾಮಾಜಿಕ ಅಡ್ಡಪರಿಣಾಮಗಳ ಕುರಿತಾದ ಸಂವಾದಗಳು ಬರೀ ಗಿಲೀಟಿನದ್ದು. ಯಾಕೆಂದರೆ ಮದ್ಯದಲ್ಲಿ ಅಸಲಿ-ನಕಲಿ ಎಂಬುದೇ ಇಲ್ಲ. ಎಲ್ಲವೂ ನಕಲಿಯೇ. ನಕಲಿ ಕುಡಿದು ಜನ ತಕ್ಷಣ ಸಾವಿಗೀಡಾದರೆ ಈ ಅಸಲಿ ಕುಡಿದು ಜನರು ನಿಧಾನಕ್ಕೆ ಸಾಯುತ್ತಾರೆ. ಎರಡರ ಪರಿಣಾಮವೂ ಒಂದೇ ಆಗಿರುವಾಗ ನಕಲಿ ಮದ್ಯದ ವಿರುದ್ಧ ಮಾಧ್ಯಮಗಳಾಗಲಿ, ಸರಕಾರಗಳಾಗಲಿ ನಡೆಸುವ ಸಮರ ಘೋಷಣೆಯು ಹಾಸ್ಯಾಸ್ಪದವಾಗಿ ಕಾಣುತ್ತದೆ. ನಕಲಿ ಮದ್ಯದ ಜಾಗದಲ್ಲಿ ಅಸಲಿ ಮದ್ಯವನ್ನು ಒದಗಿಸಿದಾಕ್ಷಣ ಆಗುವ ಬದಲಾವಣೆ ಏನೆಂದರೆ ಜನರ ಕೊಲೆಯಲ್ಲಿ ಸರಕಾರವೂ ಪಾಲುದಾರನಾಗುವುದು. ನಕಲಿ ಮದ್ಯದಲ್ಲಿ ಸರಕಾರಕ್ಕೆ ಆದಾಯ ಸಿಗುವುದಿಲ್ಲ. ತೆರಿಗೆ ತಪ್ಪಿಸಿ ಕದ್ದುಮುಚ್ಚಿ ಅದನ್ನು ಮಾರಲಾಗುತ್ತದೆ. ಅಸಲಿ ಮದ್ಯವು ಬಹುತೇಕ ನಕಲಿ ಮದ್ಯದ ಅಂಶಗಳನ್ನೇ ಹೊಂದಿದ್ದರೂ ಮತ್ತು ಅನಾರೋಗ್ಯಕರವಾಗಿದ್ದರೂ ಸರಕಾರಕ್ಕೆ ಆದಾಯ ತಂದುಕೊಡುತ್ತದೆ ಎಂಬ ಕಾರಣಕ್ಕಾಗಿ ಮದ್ಯವನ್ನು ಅಸಲಿ ಮತ್ತು ನಕಲಿ ಎಂದು ವಿಭಜಿಸಿ ಒಂದಕ್ಕೆ ಆರೋಗ್ಯಕರ ಮತ್ತು ಇನ್ನೊಂದಕ್ಕೆ ಅನಾರೋಗ್ಯಕರ ಎಂಬ ಹಣೆಪಟ್ಟಿಯನ್ನು ಅಂಟಿಸಲಾಗುತ್ತದೆ.

ಅಷ್ಟಕ್ಕೂ ಸ್ವಯಂ ಮದ್ಯವೇ ಅನಾರೋಗ್ಯಕರವಾಗಿರುವಾಗ ಅದನ್ನು ಉತ್ತಮ ಮತ್ತು ಕೆಟ್ಟ ಎಂಬ ವಿಭಜನೆ ಮಾಡುವುದಕ್ಕೆ ಏನು ಅರ್ಥವಿದೆ? ಒಬ್ಬನು ATMನಿಂದ ಹಣ ಕಳ್ಳತನ ಮಾಡಿ ಓಡಿ ಹೋಗುವಾಗ ಪಕ್ಕದಲ್ಲೇ ಇರುವ ಪಾಳು ಬಾವಿಗೆ ಬಿದ್ದುಬಿಟ್ಟನೆಂದು ಇಟ್ಟುಕೊಳ್ಳೋಣ. ಆಗ ನಡೆಯಬಹುದಾದ ಮತ್ತು ನಡೆಯಬೇಕಾದ ಚರ್ಚೆಯ ಸ್ವರೂಪ ಹೇಗಿರಬಹುದು? ATMನ ಬಳಿ ಬಾವಿ ತೋಡಿ ಇಟ್ಟದ್ದು ಯಾರು ಎಂದೋ ಅಥವಾ ಕಳ್ಳತನ ಮಾಡಿದ್ದು ಯಾರು ಎಂದೋ? ಆದರೆ ಮದ್ಯಕ್ಕೆ ಸಂಬಂಧಿಸಿ ಇವತ್ತಿನ ನಮ್ಮೆಲ್ಲ ಚರ್ಚೆಗಳ ಸ್ವರೂಪ ಹೇಗಿದೆಯೆಂದರೆ ಬಾವಿ ತೋಡಿದ್ದು ಯಾರು ಎಂಬಂತೆ. ಮದ್ಯವನ್ನು ಚರ್ಚಾ

ವಸ್ತುವಾಗಿಸುವುದಕ್ಕಿಂತ ಕಳ್ಳಭಟ್ಟಿಯನ್ನು ಮಾತ್ರ ಇಶ್ಯೂ ಆಗಿಸಿ ಕಳ್ಳಭಟ್ಟಿ ರಹಿತವಾದುದನ್ನು ಉಳಿಸಿಕೊಳ್ಳುವ ರೀತಿಯಲ್ಲಿ ಚರ್ಚೆ ನಡೆಯುತ್ತಿದೆ. ನಿಜವಾಗಿ ಕಳ್ಳಭಟ್ಟಿ ಎಂಬುದು ATM ಬಳಿ ಇರುವ ಪಾಳು ಬಾವಿಯಂತೆ. ಅದಕ್ಕೆ ಕಳ್ಳ ಬಿದ್ದದ್ದು ಅಚಾನಕ್ಕಾಗಿ. ಹಾಗಂತ ಕಳ್ಳರೆಲ್ಲ ಆ ಬಾವಿಗೆ ಬೀಳುತ್ತಾರೆಂದಲ್ಲ, ಒಂದು ವೇಳೆ ಈ ಬಾವಿಯನ್ನು ಮುಚ್ಚಿದರೂ ಮುಚ್ಚದಿದ್ದರೂ ಕಳ್ಳತನದ ಮೇಲೆ ಯಾವ ಪರಿಣಾಮವನ್ನೂ ಅದು ಬೀರುವುದಿಲ್ಲ, ಆದ್ದರಿಂದ ಚರ್ಚಿಸಬೇಕಾದದ್ದು ಕಳ್ಳತನ ಎಂಬ ಮದ್ಯದ ಬಗ್ಗೆ. ಕಳ್ಳತನಕ್ಕೆ ನಿಯಂತ್ರಣ ಹೇರಿದರೆ ಮತ್ತು ಕಳ್ಳತನ ಮುಕ್ತ ಸಮಾಜವನ್ನು ಕಟ್ಟಲು ಸೂಕ್ತ ಕ್ರಮಗಳನ್ನು ಕೈಗೊಂಡರೆ ATM ಎಂಬ ಜನಸಾಮಾನ್ಯ ಯಾವ ಬೆದರಿಕೆಯೂ ಇಲ್ಲದೆ ಬದುಕಿಕೊಳ್ಳುತ್ತಾನೆ.

## ಮದ್ಯಮುಕ್ತ ಸಮಾಜ

ಬಹುಶಃ, ಮದ್ಯಮುಕ್ತ ಸಮಾಜ ಎಂಬ ಪದ ಹಾಗೂ ಅದು ಸಾರುವ ಸಂದೇಶವು ಅಪಾರ ಖುಷಿಗೆ ಮತ್ತು ಆಹ್ಲಾದಕ್ಕೆ ಕಾರಣವಾಗುತ್ತದಾದರೂ ಅದರ ಜಾರಿಯ ಸಾಧ್ಯಾಸಾಧ್ಯತೆಗಳ ಕುರಿತಂತೆ ಆಲೋಚಿಸುವಾಗ ಹಲವು ಅಡೆ-ತಡೆ, ಓರೆ-ಕೋರೆಗಳು ಎದುರಾಗುತ್ತವೆ. ಬಹುತೇಕ ಎಲ್ಲ ರಾಜ್ಯಗಳಲ್ಲೂ ಮದ್ಯ ವರ್ಜನ ಕೇಂದ್ರಗಳಿವೆ. ಮದ್ಯಪಾನವನ್ನು ನಿರುತ್ತೇಜಿಸುವುದಕ್ಕೆಂದು ಸರಕಾರವೇ ಹುಟ್ಟು ಹಾಕಿರುವ ಮದ್ಯಪಾನ ಸಂಯಮ ಮಂಡಳಿಯಂಥ ಸಂಸ್ಥೆಯಿದೆ. ಆದರೆ ಇವು ಎಷ್ಟು ಕ್ರಿಯಾಶೀಲವಾಗಿವೆ ಎಂಬ ಬಗ್ಗೆ ಮಾತ್ರ ಅಪವಾದಗಳಿವೆ. ಮದ್ಯದ ಆದಾಯದಿಂದಲೇ ಉಸಿರಾಡುವ ಸರಕಾರವೊಂದು ಮದ್ಯವನ್ನು ನಿರುತ್ತೇಜಿಸುವ ಸಂಸ್ಥೆಯನ್ನು ಕ್ರಿಯಾಶೀಲವಾಗಿರಲು ಅವಕಾಶ ಕೊಡಬಹುದೇ? ಇಂಥ ಮಂಡಳಿ ಹಮ್ಮಿಕೊಳ್ಳುವ ಕಾರ್ಯಕ್ರಮಗಳಿಗೆ ಬೆಂಬಲ ಮತ್ತು ಅನುದಾನ ನೀಡಬಹುದೇ? ಮದ್ಯಮುಕ್ತ ಸಮಾಜವನ್ನು ಕಟ್ಟುವಲ್ಲಿ ಆ ಸಂಸ್ಥೆಗೆ ಎಷ್ಟು ಸ್ವಾತಂತ್ರ್ಯ ಇರಬಹುದು? ಇನ್ನೂ ಇಂಥ ಅನೇಕ ಅನುಮಾನಗಳು ಇದ್ದಾಗ್ಯೂ ಮದ್ಯಮುಕ್ತ ಸಮಾಜವನ್ನು ನಿರ್ಮಿಸಲೇ ಬೇಕಾದುದು ಯಾವುದಾದರೊಂದು ನಿರ್ದಿಷ್ಟ ಧರ್ಮದ ಅಥವಾ ನಿರ್ದಿಷ್ಟ ಸಂಘಟನೆ, ಜಾತಿಯ ಗುರಿಯಾಗಿ ಇವತ್ತು ಉಳಿದಿಲ್ಲ, ಎಲ್ಲ ಧರ್ಮಗಳೂ ಮದ್ಯದ ವಿರೋಧಿಗಳೇ. ಯಾವ ಸಂಘಟನೆಯೂ ತನ್ನ ಅಜೆಂಡಾದಲ್ಲಾಗಲಿ, ಬೈಲಾದಲ್ಲಾಗಲಿ ಮದ್ಯ ಕಡ್ಡಾಯ ಎಂಬ ಅಂಶವನ್ನು ಸೇರಿಸಿಕೊಂಡೇ ಇಲ್ಲ, ಬಹುಶಃ ಮದ್ಯದ ವಿರುದ್ಧ ಸಾರ್ವತ್ರಿಕ ಅಭಿಯಾನವೊಂದನ್ನು ಕೈಗೊಳ್ಳುವುದಕ್ಕೆ ಇದು ದೊಡ್ಡದೊಂದು ಪ್ರಚೋದಕ ಅಂಶವಾಗಿದೆ. ಈ ದೇಶದಲ್ಲಿ ಅಥವಾ ಕರ್ನಾಟಕದಲ್ಲಿ ಅಸಂಖ್ಯ ದೇವಾಲಯಗಳಿವೆ. ಮಸೀದಿ, ಚರ್ಚ್, ಬಸದಿಗಳಿವೆ. ಮದ್ಯವರ್ಜನ ಶಿಬಿರಗಳನ್ನು ನಡೆಸುವ ಸಂಸ್ಥೆಗಳಿವೆ. ಮದ್ಯವನ್ನು ವಿರೋಧಿಸುವ ಧರ್ಮಾಧಾರಿತ ಸಂಘಟನೆಗಳಿವೆ. ಇವೆಲ್ಲ ಇವತ್ತು ರಾಜ್ಯದಲ್ಲಿ ಒಂದಾಗಿಬಿಟ್ಟರೆ ಮತ್ತು ತಮ್ಮೆಲ್ಲ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಮದ್ಯದ ವಿರುದ್ಧ ಹೋರಾಟ ಸಂಘಟಿಸಿದರೆ ಯಾವ ಸರಕಾರವೂ ಮದ್ಯಪಾನದ ಪರ ವಹಿಸಿ ಮಾತಾಡಲಾರರು. ಈ ರಾಜ್ಯದ ಪ್ರತಿ

ಮಸೀದಿ, ದೇವಾಲಯ, ಚರ್ಚ್ ಮತ್ತಿತರ ಕೇಂದ್ರಗಳಿಂದ ಮದ್ಯ ವಿರೋಧಿ ಧ್ವನಿ ಮತ್ತು ಅಭಿಯಾನವೊಂದು ಹೊರಡಬೇಕು. ಧಾರ್ಮಿಕ ಮುಖಂಡರು, ಯತಿಗಳು, ಸ್ವಾಮೀಜಿಗಳು, ವಿದ್ವಾಂಸರು, ಅರ್ಚಕರು, ಮೌಲಾನಗಳು, ಪಾದ್ರಿಗಳು, ಮುನಿಗಳು ಮತ್ತಿತರ ಎಲ್ಲರೂ ಒಂದೇ ವೇದಿಕೆಯಲ್ಲಿ, ಒಂದೇ ಸಭೆಯಲ್ಲಿ ಒಟ್ಟಾಗಿ ಮದ್ಯವಿರೋಧಿ ಪ್ರತಿಭಟನೆಯಲ್ಲಿ ಭಾಗವಹಿಸಬೇಕು. ಅಣ್ಣಾ ಹಜಾರೆಗೆ ಭ್ರಷ್ಟಾಚಾರದ ವಿರುದ್ಧ ದೇಶವ್ಯಾಪಿ ಪ್ರತಿಭಟನೆಯ ಕಿಚ್ಚು ಹಚ್ಚಲು ಸಾಧ್ಯವಾಗಿದೆಯೆಂದರೆ ಮತ್ತು ಆ ಪ್ರತಿಭಟನೆಯು ಲೋಕಪಾಲ್ ಕಾನೂನನ್ನೇ ಸಂಸತ್ತು ಅಂಗೀಕರಿಸುವಷ್ಟು ಪ್ರಭಾವಶಾಲಿಯಾಗಬಹುದಾದರೆ ಎಲ್ಲರೂ ವಿರೋಧಿಸುವ ಮದ್ಯದ ವಿರುದ್ಧ ಯಾಕೆ ಇಂಥದ್ದೊಂದು ಪ್ರತಿಭಟನೆ ಸಾಧ್ಯವಿಲ್ಲ? ಮದ್ಯಕ್ಕೆ ಹೋಲಿಸಿದರೆ ಭ್ರಷ್ಟಾಚಾರದ ಅಪಾಯಗಳು ಕಡಿಮೆ. ಭ್ರಷ್ಟಾಚಾರದಿಂದ ಪತ್ನಿ-ಮಕ್ಕಳು ಬೀದಿ ಪಾಲಾಗುವುದಿಲ್ಲ, ಹಲ್ಲೆ, ಹತ್ಯೆ, ಅನೈತಿಕತೆಗಳು ನಡೆಯುವುದಿಲ್ಲ, ಶಾರೀರಿಕವಾಗಿ ಅದು ಅನಾರೋಗ್ಯಕಾರಿಯೂ ಅಲ್ಲ, ಅದು ಪತ್ನಿ-ಮಕ್ಕಳು, ಮನೆ, ಸಮಾಜಕ್ಕೆ ಯಾವ ತೊಂದರೆಯನ್ನೂ ಕೊಡುವುದಿಲ್ಲ, ವ್ಯಕ್ತಿ ಅಥವಾ ಕಂಪೆನಿಯಿಂದ ಕಾನೂನುಬಾಹಿರವಾಗಿ ದುಡ್ಡು ಕಸಿಯುವ ಪ್ರಕ್ರಿಯೆ ಇದಾದರೂ ಅದಕ್ಕೆ ಬದಲಾಗಿ ವ್ಯಕ್ತಿ ಅಥವಾ ಕಂಪೆನಿಯ ಉದ್ದೇಶವನ್ನು ಅದು ಈಡೇರಿಸುತ್ತದೆ. ಆದರೆ ಮದ್ಯ ಇವಾವುದನ್ನೂ ಹೋಲುವುದಿಲ್ಲ, ಅದು ಮನೆ-ಮಡದಿ-ಮಕ್ಕಳು, ಸಮಾಜ, ಆರೋಗ್ಯ ಎಲ್ಲದಕ್ಕೂ ವೈರಿ. ಎಲ್ಲವನ್ನೂ ಅದು ಹಾಳುಗೆಡವಿ ಬಿಡುತ್ತದೆ. ಇಷ್ಟಿದ್ದೂ ಭ್ರಷ್ಟಾಚಾರದ ವಿರುದ್ಧ ಸಮಾಜವನ್ನು ಎತ್ತಿಕಟ್ಟಲು ಅಣ್ಣಾ ಹಜಾರೆಗೆ ಸಾಧ್ಯವೆಂದಾದರೆ ಮದ್ಯಪಾನದ ವಿರುದ್ಧ ಸಮಾಜವನ್ನು ಎದ್ದು ನಿಲ್ಲಿಸುವುದಕ್ಕೆ ಸ್ವಾಮಿ, ಮೌಲಾನಾ, ಪಾದ್ರಿ, ಮುನಿ, ಅಥವಾ ಇನ್ನಿತರರಿಗೆ ಯಾಕೆ ಸಾಧ್ಯವಾಗುವುದಿಲ್ಲ, ನಿಜವಾಗಿ ಭ್ರಷ್ಟಾಚಾರಕ್ಕೂ ಒಂದು ಹಂತದವರೆಗೆ ಕುಡಿತವೇ ಕಾರಣವಾಗಿರುತ್ತದೆ. ಹೀಗೆ ಸಕಲ ಕೆಡುಕುಗಳ ತಾಯಿಯಾಗಿರುವ ಮದ್ಯದ ವಿರುದ್ಧ ಜನರನ್ನು ಸಂಘಟಿಸುವ ಜವಾಬ್ದಾರಿಯಿಂದ ಈ ಸಮಾಜದ ನಾಯಕರನ್ನು ತಡೆಗಟ್ಟಿರುವುದು ಯಾವುದು, ಯಾರು?

ಮದ್ಯದ ವಿರುದ್ಧ ಕಠಿಣ ನಿಷೇಧವನ್ನು ಇಸ್ಲಾಮ್ ವಿಧಿಸಿರುವುದರ ಹೊರತಾಗಿಯೂ ಮುಸ್ಲಿಮ್ ಸಂಘಟನೆಗಳು ಈ ವಿಷಯದಲ್ಲಿ ಇನ್ನೂ ಗಂಭೀರವಾಗಿಲ್ಲ, ಮುಸ್ಲಿಮ್ ಸಮುದಾಯದ ಸಂಘಟನೆಗಳು ವಾದ-ಪ್ರತಿವಾದ, ವಾರ್ಷಿಕ ಸಮ್ಮೇಳನ, ಅನಾಚಾರ, ಮೂಢನಂಬಿಕೆಗಳಿಗಾಗಿ ಮಾಡುವ ವೆಚ್ಚವನ್ನು ಮದ್ಯಮುಕ್ತ ಸಮಾಜದ ನಿರ್ಮಾಣಕ್ಕಾಗಿ ವ್ಯಯಿಸುವ ಮನಸ್ಸು ಮಾಡಿರುತ್ತಿದ್ದರೆ ಇವತ್ತಿನ ಸಮಾಜದ ಚಿತ್ರಣ ಎಷ್ಟೋ ಭಿನ್ನವಾಗಿರುತ್ತಿತ್ತು. ನಿಜವಾಗಿ ಧಾರ್ಮಿಕ ಸಂಘಟನೆಗಳ ಅಜೆಂಡಾಗಳಲ್ಲಿ ಮದ್ಯಕ್ಕೆ ಪ್ರಮುಖ ಸ್ಥಾನ ಸಿಗಬೇಕಾದ ತುರ್ತು ಸ್ಥಿತಿ ಇವತ್ತಿನದು. ಯಾಕೆಂದರೆ ಮದ್ಯಮುಕ್ತ ಸಮಾಜ ಎಂಬುದೇ ಇಸ್ಲಾಮಿನ ಮಾದರಿ ಸಮಾಜ. ಮುಸ್ಲಿಮರು ಮಾತ್ರ ಕುಡಿಯದಿರುವುದು ಈ ಮಾದರಿಯ ಉದ್ದೇಶವಲ್ಲ, ಮದ್ಯವನ್ನು ಕೆಡುಕುಗಳ ತಾಯಿ ಎಂದೇ ಪ್ರವಾದಿ ಮುಹಮ್ಮದ್(ಸ) ಕರೆದಿದ್ದಾರೆ. ಅದು

ಮುಸ್ಲಿಮ್-ಮುಸ್ಲಿಮೇತರ ಎಂಬ ಭೇದವಿಲ್ಲದೇ ಇಡಿಯ ಸಮಾಜದ ಕೆಡುಕು. ಆ ಕೆಡುಕನ್ನು ಸಮಾಜದಿಂದ ಇಲ್ಲವಾಗಿಸುವ ಹೊಣೆಗಾರಿಕೆಯು ಪ್ರವಾದಿ ಮುಹಮ್ಮದರ(ಸ) ಅನುಯಾಯಿಗಳ ಮೇಲೂ ಇದೆ. ಈ ವಿಷಯದಲ್ಲಿ ಸಾಮಾಜಿಕ ಜಾಗೃತಿಯನ್ನು ಕೈಗೊಳ್ಳಲು ಸಂಘಟನಾತ್ಮಕ ಭಿನ್ನಾಭಿಪ್ರಾಯಗಳು ಅಡ್ಡ ಬರಲಾರದು. ವಿವಿಧ ಮಸೀದಿಗಳ ಜಮಾಅತ್ ಕಮಿಟಿಗಳು ಒಟ್ಟು ಸೇರಿ ಸಮನ್ವಯ (Co-ordination) ಸಮಿತಿಯನ್ನು ರಚಿಸಿ ಸಮಾಜವನ್ನು ಎಚ್ಚರಿಸುವ ಕೆಲಸದಲ್ಲಿ ಜೊತೆಯಾಗಿ ಮುಂದುವರಿಯಬೇಕು. ಹಾಗೆಯೇ ಒಂದು ಊರಿನಲ್ಲಿ ಮದ್ಯದಂಗಡಿ ಬೇಕೋ ಬೇಡವೋ ಎಂಬುದನ್ನು ತೀರ್ಮಾನಿಸಲು ಆ ಊರಿನ ಜನರಿಗೆ ಆಯ್ಕೆಯ ಸ್ವಾತಂತ್ರ್ಯ ನೀಡುವಂತೆ ಪಂಚಾಯತ್ ರಾಜ್ ಕಾಯ್ದೆಯಲ್ಲಿ ಸೂಕ್ತ ತಿದ್ದುಪಡಿ ತರುವಂತೆ ಸರಕಾರದ ಮೇಲೆ ಒತ್ತಡ ಹೇರಬೇಕು. ಸಿನಿಮಾ ಮತ್ತು ಇತರ ಕ್ಷೇತ್ರಗಳು ಮದ್ಯದ ದೃಶ್ಯ ಅಥವಾ ಜಾಹೀರಾತು ಪ್ರಕಟಿಸದಂತೆ ಒತ್ತಾಯ ಪಡಿಸಬೇಕು. ಮದ್ಯಪಾನದಿಂದಾಗುವ ಹಾನಿಯ ಕುರಿತಂತೆ ಗಲ್ಲಿ-ಗಲ್ಲಿಗಳಲ್ಲಿ, ಪ್ರಮುಖ ಸಾರ್ವಜನಿಕ ಸ್ಥಳಗಳಲ್ಲಿ ಭಿತ್ತಿಚಿತ್ರಗಳನ್ನು ಪ್ರದರ್ಶಿಸಬೇಕು. ಡಿ. ಎಡಿಕ್ಷನ್ ಅಥವಾ ಮದ್ಯವರ್ಜನ ಕೇಂದ್ರಗಳು ಹೆಚ್ಚಾಗಬೇಕು. ಅಲ್ಲದೇ ಸಮಾಜದ ಮಹಿಳೆಯರನ್ನು ಈ ಹೋರಾಟದಲ್ಲಿ ಭಾಗಿಗೊಳಿಸುವ ಮೂಲಕ ಹೋರಾಟಕ್ಕೆ ಸಾರ್ವತ್ರಿಕ ಸ್ವರೂಪವನ್ನು ನೀಡಬೇಕು. ಹಾಗೆಯೇ ಸರಕಾರವು ಮದ್ಯಪಾನವನ್ನು ಸಂಪೂರ್ಣವಾಗಿ ನಿಷೇಧಿಸುವ ಪ್ರಾಥಮಿಕ ಹಂತವಾಗಿ ಮದ್ಯಕ್ಕೆ ದುಬಾರಿ ತೆರಿಗೆ ವಿಧಿಸುವಂತೆ ಮತ್ತು ಮದ್ಯದ ಲಭ್ಯತೆಯು ಕ್ಷೀಣಗೊಳ್ಳುವಂತೆ ಮಾಡಲು ಒತ್ತಡ ಹೇರಬೇಕು. ಮದ್ಯವನ್ನು ಖರೀದಿಸುವುದಕ್ಕೆ ಮತ್ತು ಸೇವಿಸುವುದಕ್ಕೆ ಇರುವ ಈಗಿನ ಪ್ರಾಯಮಿತಿಯನ್ನು ಹೆಚ್ಚಿಸುವಂತೆ ಆಗ್ರಹಿಸಬೇಕು. ಮದ್ಯಪಾನ ಸಂಯಮ ಮಂಡಳಿಯಂಥ ಸರಕಾರಿ ಸಂಸ್ಥೆಗಳ ಕಾರ್ಯ ಚಟುವಟಿಕೆಯನ್ನು ವ್ಯಾಪಕಗೊಳಿಸುವುದಕ್ಕೆ ಒತ್ತಾಯ ಮಾಡಬೇಕು. ಇವೆಲ್ಲ ಸಾಧ್ಯವಾದರೆ ಬಹುಶಃ ಮುಂದಿನ ಕೆಲವಾರು ವರ್ಷಗಳಲ್ಲಿ ಮದ್ಯ ಮುಕ್ತ ಸಮಾಜ ಸ್ಥಾಪನೆಯಾಗುವ ಸಾಧ್ಯತೆಯು ಉಜ್ವಲವಾಗಬಹುದು.

